# ಪಾನಕ

ಎಪ್ರಿಲ್ 2003 ತಿಂಗಳ ಪತ್ರಿಕೆ

- ದಕ್ಷಿಣ ಕರ್ನಾಟಕದಲ್ಲಿ ಇತ್ತೀಚಿನ ಸಾರಾಯಿ ವಿರೋಧಿ ಚಟುವಟಿಕೆಗಳು
- ಕಾಲವನ್ನು ಹಿಂದಿಕ್ಕಿದವರು
- ಕಹಿ ನೆನಪುಗಳನ್ನು ಹೊತ್ತು ನಗುತ್ತಾ ಸುಖದಿಂದ ಬಾಳಲು ಸಾಧ್ಯವೆ ?...
- ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆ

# ಮಾನಸ

ತಿಂಗಳ ಪತ್ರಿಕೆ ಎಪ್ರಿಲ್ 2003

ಸಂಪುಟ 18 ಸಂಚಿಕೆ : 3





**ವಿಳಾಸ**

" **ಮಾನಸ** " ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067
**ಇ-ಮೈಲ್** : manasapathrike@yahoo.co.in



**ಸೂಚನೆ :** ಸೂಚನೆ: ಬಿಡಿಪ್ರತಿ 10-00 ರೂ.
ವಾರ್ಷಿಕ ಚಂದಾ 100-00 ರೂ.
ಸಂಸ್ಥೆಗಳಿಗೆ 150-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ...






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ಸಾರಾಯಿ ಮಾರಾಟ, ಮಟ್ಕ, ಜೂಜು, ಆನ್‌ಲೈನ್ ಲಾಟರಿಯನ್ನು ರದ್ದು ಮಾಡುವ ಬಗ್ಗೆ ಕರ್ನಾಟಕ ಸರ್ಕಾರ ತಳೆದ ನಿಲುವು, ಸರ್ಕಾರದ ಆರ್ಥಿಕ ಹಾಗೂ ಬೌದ್ಧಿಕ ದಿವಾಳಿತನವನ್ನು ಎತ್ತಿ ತೋರಿಸುತ್ತದೆ. ಕುಡಿತದ ಚಟದಿಂದ ಗ್ರಾಮಾಂತರ ಪ್ರದೇಶದ ಜನತೆ ಸಂಪೂರ್ಣವಾಗಿ ವಿನಾಶದ ಅಂಚಿಗೆ ತಲುಪಿದೆ. ಜನತೆಯ ಅದರಲ್ಲೂ ಹಿಂದುಳಿದ ಜಾತಿ, ವರ್ಗದ ಹಿತಾಸಕ್ತಿಯನ್ನು ಕಾಪಾಡಬೇಕಾದ ಸರ್ಕಾರಕ್ಕೆ ಸಾರಾಯಿ ಮಾರಾಟದಿಂದ ಬರುವ ಆದಾಯವೇ ಪ್ರಮುಖ ಆದಾಯದ ಮೂಲವಾಗಿದೆ.

ಕುಡಿತದ ಚಟದ ಪರಿಣಾಮವಾಗಿ ಕೌಟುಂಬಿಕ ಹಿಂಸೆಯು ತೀವ್ರ ಪ್ರಮಾಣದಲ್ಲಿ ಹೆಚ್ಚುತ್ತಿದೆ. ಕುಟುಂಬದ ಹೆಂಗಸರನ್ನು ಅಮಾನುಷವಾಗಿ ಹೊಡೆಯುವುದು ಮಾನಸಿಕವಾಗಿ ಹಿಂಸಿಸುವುದು ಬದುಕುವ ಕ್ರಮವಾಗಿ ಬಿಟ್ಟಿದೆ. ಈ ಚಟದಿಂದಾಗಿ ಮಹಿಳೆಯರು ಮನೆ ಮಾರು, ಒಡವೆ, ವಸ್ತುಗಳನ್ನು ಕಳೆದು ಕೊಳ್ಳುತ್ತಿದ್ದಾರೆ. ಕುಟುಂಬದ ನಿರ್ವಹಣೆ ಸಂಪೂರ್ಣವಾಗಿ ಹೆಂಗಸರ ಮೇಲೆ ಬಿದ್ದಿದೆ. ಈ ಸಮಸ್ಯೆಯ ಪರಿಹಾರಕ್ಕೆ ಹೆಂಗಸರು ತಹತಹಿಸುತ್ತಿದ್ದಾರೆ.

ಕರ್ನಾಟಕದ ಹಲವಾರು ಜಿಲ್ಲೆಗಳ ಗ್ರಾಮಾಂತರ ಪ್ರದೇಶದಲ್ಲಿ ಮಹಿಳಾ ಸಂಘಗಳು, ಹಾಗೂ ಸ್ತ್ರೀಶಕ್ತಿ ಗುಂಪುಗಳು, ಸಾರಾಯಿ ಮಾರಾಟದ ವಿರುದ್ಧ ಧರಣಿ, ಪಿಕೆಟಿಂಗ್, ಮನವಿ ನೀಡುವುದು ಲಾರಿಗಳನ್ನು ತಡೆಯುವುದು, ಸಾರಾಯಿ ಮಾರಾಟದ ಅಂಗಡಿಗಳನ್ನು ಮುಚ್ಚಿಸುವುದು, ಪ್ರತಿಭಟನೆಯನ್ನು ನಡೆಸುತ್ತಲೇ ಬಂದಿದ್ದಾರೆ. ಆದರೆ ಸಾರಾಯಿ ಮಾರಾಟದ ಪರ ಇರುವ ಲಾಭಗಳಿಂದಾಗಿ ತಕ್ಷಣಕ್ಕೆ ಸ್ಥಗಿತಗೊಂಡಂತಹ ಮಾರಾಟ ಪುನಃ ಪ್ರಾರಂಭವಾಗಿವೆ. ಸ್ಥಳೀಯ ರಾಜಕೀಯ ಹಾಗೂ ಆಡಳಿತ ಶಾಹಿಗಳ ಕುಮ್ಮಕ್ಕಿನಿಂದಾಗಿ ಸಾರಾಯಿ ಮಾರಟ ನಿರಂತರವಾಗಿ ಮುಂದುವರಿಯುತ್ತಿದೆ.

ಇತ್ತೀಚಿಗೆ ಸಾರಾಯಿ ಮಾರಾಟ ಹಾಗೂ ಆನ್‌ಲೈನ್ ಲಾಟರಿಯನ್ನು ರದ್ದು ಪಡಿಸಬೇಕೆಂಬ ಬೇಡಿಕೆಯನ್ನು ಕುರಿತು ಕರ್ನಾಟಕದ ಮುಖ್ಯ ಮಂತ್ರಿಗಳು ನೀಡಿರುವ ಹೇಳಿಕೆಯನ್ನು ಮಹಿಳಾ ಸಂಘಟನೆಗಳು ಹಾಗೂ ಸಾಮಾಜಿಕ ಕಾಳಜಿಯುಳ್ಳ ಪ್ರತಿಯೊಬ್ಬರು ಖಂಡಿಸಬೇಕು. ಸಂಪೂರ್ಣ ಅಧಿಕಾರವನ್ನು ಹೊಂದಿರುವ ಹೆಂಡದ ದೊರೆಗಳೇ ಸರ್ಕಾರವನ್ನು ನಿಯಂತ್ರಿಸುವ ಪರಿಸ್ಥಿತಿ ಇರುವ ಇಂದಿನ ಸಂದರ್ಭದಲ್ಲಿ ಸ್ಥಳೀಯ ಶಕ್ತಿಗಳನ್ನು ಅಮಾಯಕ ಹೆಂಗಸರು ಎದುರಿಸಲು ಸಮರ್ಥರಾಗಿದ್ದಾರೆಯೆ? ಹೆಂಗಸರು ತಮ್ಮ ಗಂಡಂದಿರನ್ನು ನಿಯಂತ್ರಣದಲ್ಲಿ ಇಟ್ಟುಕೊಂಡು, ತಮ್ಮ ಶೃಂಗಾರದಿಂದ ಗಂಡಂದಿರನ್ನು ಸರಿಪಡಿಸ ಬೇಕು, ಇಂತಹ ಮೂಲದಿಂದ ಬರುವ ಆದಾಯವನ್ನು ಅಭಿವೃದ್ಧಿ ಕಾರ್ಯಗಳಾಗಿ ಉಪಯೋಗಿಸಲಾಗುವುದು ಮುಂತಾದ ಮುಖ್ಯ ಮಂತ್ರಿಯವರ ಅಸಂಬದ್ಧ ಹೇಳಿಕೆಗಳು ಖಂಡನಾರ್ಹ.

"ಗಂಡಸರನ್ನು ರಿಪೇರಿ" ಮಾಡುವ ಮಹತ್ತರ ಜವಾಬ್ದಾರಿಯನ್ನು ಹೆಂಗಸರ ಮೇಲೆ ಹಾಕುವ ಪುರುಷ ಪ್ರಧಾನ ಆಲೋಚನಾ ಕ್ರಮದ ಹಿಂದೆ ಒಂದು ರಾಜಕೀಯ ಹುನ್ನಾರವೇ ಇದೆ. ಇಂತಾಹ ಸಮಸ್ಯೆಗಳಿಗೆ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ವರೂಪವಿಲ್ಲವೆ? ಇವುಗಳನ್ನು ಕುಟುಂಬದ ನೆಲೆಯಲ್ಲಿ ಪರಿಹರಿಸಲು ಸಾಧ್ಯವೆ? ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸರ್ಕಾರದ ಪಾತ್ರವೇನು?

ಬಡವರ್ಗದ ಮೂಲದಿಂದ ಬರುವ ಆದಾಯ ಯಾರ ಅಭಿವೃದ್ಧಿಗಾಗಿ ಬಳಸಲಾಗುವುದು? ಒಂದು ವರ್ಗದ ಜನರನ್ನು ಶೋಷಿಸಿ ಜಾಗತಿಕ ಬಂಡವಾಳಶಾಹಿಗಳಿಗೆ ಮಣೆಹಾಕಲಾಗುತ್ತಿದೆ. ಜನತೆಗೆ ಆಹಾರ, ಅಕ್ಷರ, ಆರೋಗ್ಯ ಸೂರು, ರಸ್ತೆ, ನೀರು ಮುಂತಾದ ಸೌಲಭ್ಯಗಳನ್ನು ಒದಗಿಸಿ ಕೊಡಲು ವಿಫಲವಾಗುವ ಸರ್ಕಾರಗಳು ಬಹುರಾಷ್ಟ್ರೀಯ ಕಂಪನಿಗಳಿಗೆ ಸಲ್ಲದ ರಿಯಾಯಿತಿಗಳನ್ನು ನೀಡುತ್ತಿರುವುದರ ಮೂಲಕ ಯಾರ ಅಭಿವೃದ್ಧಿಗಾಗಿ ಪ್ರಯತ್ನಿಸುತ್ತಿದೆ ಎನ್ನುವುದು ಸ್ಪಷ್ಟ.

ಮಹಿಳೆಯರು ಸಂಘಟನೆ ಯಾಗುವುದರ ಮೂಲಕ ಇಂತಹ ಸಮಸ್ಯೆಗೆ ಪರಿಹಾರ ಸಾಧ್ಯ. ಇಂತಹ ಸಂಘಟನೆಗೆ ಸಮಸ್ಯೆಯ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ವರೂಪಗಳ ಆಯಾಮದ ಅರಿವಿರಬೇಕು. ಈ ನೆಲೆಯಲ್ಲಿ ಸಂಘಟಿತರಾಗಿ ಹೋರಾಟ ನಡೆಸುವುದೇ ಸಮಸ್ಯೆಯ ಪರಿಹಾರಕ್ಕಿರುವ ಮಾರ್ಗ.

– ಸಂಪಾದಕ ಮಂಡಳಿ

# ದಕ್ಷಿಣ ಕರ್ನಾಟಕದಲ್ಲಿ ಇತ್ತೀಚಿನ ಸಾರಾಯಿ ವಿರೋಧಿ ಚಳವಳಿಗಳು

ಕರ್ನಾಟಕದಲ್ಲಿ ಸಾರಾಯಿ ಮಾರಾಟ ಒಂದು ಬಹು ದೊಡ್ಡ ಆದಾಯ ಮೂಲವಾಗಿದೆ. ಈ ಮಾತನ್ನು ಇತ್ತೀಚಿನ ದಶಕಗಳಲ್ಲಿ ಅಧಿಕಾರಕ್ಕೆ ಬಂದ ಬೇರೆಬೇರೆ ಪಕ್ಷಗಳ ಸರಕಾರಗಳು ಒಪ್ಪಿಕೊಳ್ಳುತ್ತಲೇ ಬಂದಿವೆ. ಚುನಾವಣೆಗಳು ಹತ್ತಿರ ಬರುತ್ತಿದ್ದಂತೆ "ಮಧ್ಯಪಾನ ನಿಷೇಧದ ಪರವಾದ ನಿಲುವನ್ನು ತಮ್ಮ ಪಕ್ಷ ಹೊಂದಿದೆ. ಜನತೆ ತಮಗೆ ಅಧಿಕಾರವನ್ನು ನೀಡಿದರೆ ತಮ್ಮ ಸರಕಾರ ಪಾನನಿರೋಧ ಜಾರಿಗೆ ತರಲು ಬದ್ಧವಾಗಿರುತ್ತದೆ" ಎನ್ನುತ್ತಲೇ ಅಧಿಕಾರಕ್ಕೆ ಬರುವ ಪಕ್ಷಗಳು, ಅಧಿಕಾರಕ್ಕೆ ಬಂದ ನಂತರ ತಮ್ಮ ಹಿಂದಿನ ನಿಲುವನ್ನು ಬದಲಾಯಿಸುತ್ತವೆ. ಪಾನನಿರೋಧ ತರುವುದರಿಂದ ಸರಕಾರದ ಬೊಕ್ಕಸಕ್ಕೆ ಆಗುವ ನಷ್ಟದ ಅಂಕಿ ಅಂಶಗಳನ್ನು ಕೊಡುತ್ತವೆ ; ನಂತರ ಹಾಗೆ ಮಾಡದಿರುವ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತವೆ. ಇದು ಸಂಪ್ರದಾಯವೆಂಬಂತೆ ಎಲ್ಲಾ ರಾಜಕೀಯ ಪಕ್ಷಗಳು ಪಾನನಿರೋಧ ಕುರಿತಂತೆ ಹೆಚ್ಚು ಕಡಿಮೆ ಒಂದೇ ನಿಲುವನ್ನು ತಳೆಯುತ್ತಾ ಬಂದಿರುವುದು ಸರ್ವವಿದಿತ. ಇದು ಜನತೆಗೂ ಒಪ್ಪಿತವೇನೋ ಎಂಬ ಭಾವನೆ ಮೂಡಿ ಅದು ಗಟ್ಟಿಯಾಗುತ್ತಾ ಹೋಗುತ್ತಿದೆ ಎನ್ನುವಷ್ಟರಲ್ಲಿ ಯಾವುದೋ ಮೂಲೆಯಲ್ಲಿ ಪಾನ ವಿರೋಧಿ ಕೂಗು ಕ್ಷೀಣದನಿಯಲ್ಲಿ ಆರಂಭವಾಗಿ ಕ್ರಮೇಣ ಅದು ಮುಗಿಲೆತ್ತರದ ಘರ್ಜನೆಯಾಗಿ ಮಾರ್ಪಡುತ್ತವೆ. ಆ ದನಿಗಳಲ್ಲಿ ಮಹಿಳೆಯರದೇ ಸಿಂಹಪಾಲಾಗಿರುತ್ತದೆ. ಅವು ಅಂದಿನ ಸರಕಾರಗಳಿಗೆ ಸವಾಲಾಗುತ್ತವೆ; ಅಧಿಕಾರದ ಕುರ್ಚಿಗಳನ್ನು ಅಲ್ಲಾಡಿಸುತ್ತವೆ. ಆ ದನಿಗಳ ದಮನಕ್ಕಾಗಿ ಸರಕಾರಗಳು ತಮ್ಮೆಲ್ಲಾ ಪ್ರಯತ್ನಗಳನ್ನು ಮಾಡುತ್ತವೆ. ತಮ್ಮ ಲಾಭಕೋರ ದೃಷ್ಟಿಯನ್ನು ಪ್ರಶ್ನಿಸುವ ಹೆಂಗಳೆಯರನ್ನು ಸಹಿಸದ ಸರಕಾರಗಳು ತಮ್ಮ ದಮನಕಾರೀ ತಂತ್ರಗಳಿಂದ ಆ ದನಿಗಳನ್ನು ಬಗ್ಗು ಬಡಿಯುತ್ತವೆ. ಇದರಿಂದ ಸರಕಾರಗಳಿಗೆ ತಾತ್ಕಾಲಿಕ ಪರಿಹಾರ ದೊರಕುತ್ತದಾದರೂ, ಸಮಸ್ಯೆಯು ಫೀನಿಕ್ಸ್‌ನಂತೆ ಮತ್ತೆಂದೋ ತಲೆಯೆತ್ತುತ್ತದೆ. ಇದಕ್ಕೆ ಉತ್ತಮ ನಿದರ್ಶನವಾಗಿ ರಾಜ್ಯದ ಒಂದಲ್ಲ ಒಂದುಕಡೆ ಪಾನ ನಿರೋಧ ಚಳವಳಿಗಳು ನಡೆಯುತ್ತಾ ಬಂದಿರುವುದನ್ನು ಇತಿಹಾಸದ ಪುಟಗಳನ್ನು ಮಗುಚಿದಾಗ ಕಾಣಬಹುದಾಗಿದೆ.

ಮಧ್ಯಪಾನ ಮಹಿಳೆಯರ ದಿನನಿತ್ಯದ ಬದುಕಿಗೆ ಸವಾಲಾಗಿದೆ; ಅವರ ನೆಮ್ಮದಿಯ ಬದುಕಿಗೆ ಮಾರಕವಾಗಿದೆ. ಏಕೆಂದರೆ; ಈ ಚಟಕ್ಕೆ ಬಲಿಯಾಗುವವರು ಸಾಮಾನ್ಯವಾಗಿ ಪುರುಷರೇ ಆಗಿದ್ದಾರೆ. ಇದಕ್ಕೆ ಬಲಿಯಾಗುವ ಕಾರ್ಮಿಕ ತಾನು ದಿನವಿಡೀ ದುಡಿದು ಸಂಪಾದಿಸಿದ ಹಣವನ್ನು ಸಾರಾಯಿಗೇ ಸುರಿದು ಹೆಂಡತಿ-ಮಕ್ಕಳನ್ನು ಉಪವಾಸ ಕೆಡಹುತ್ತಾನೆ. ಅಷ್ಟೇ ಅಲ್ಲ, ಹೆಂಡತಿ ತಾನು ಹಡೆದ ಮಕ್ಕಳ ಉಪವಾಸದ ಬವಣೆಯನ್ನು ನೀಗಲು ಕೂಲಿನಾಲಿ ಮಾಡಿ ತಂದ ಹಣವನ್ನು ಹೆಂಡತಿಯಿಂದ ಕಸಿದುಕೊಂಡು ಸಾರಾಯಿ ಕುಡಿದು ಬರುವ ಅಥವಾ ಹೆಂಡತಿಗೆ ಹಣ ಕೊಡೆಂದು ಪೀಡಿಸಿ, ಹೊಡೆದು ಬಡಿದು ಕಾಡುವ, ಕೆಲವೊಮ್ಮೆ ತಮ್ಮ ಹೆಂಡತಿ ಮಕ್ಕಳ ಪ್ರಾಣಗಳಿಗೇ ಕುತ್ತು ತರುವ ಪುರುಷರಿದ್ದಾರೆ.

ಸಮಾಜದ ಮಧ್ಯಮ ಮತ್ತು ಮೇಲ್ವರ್ಗದ ಪುರುಷರೂ ಮದ್ಯಪಾನದ ಚಟದಿಂದ ಹೊರತಾಗಿಲ್ಲ. ಈ ವರ್ಗದ ಕೌಟುಂಬಿಕ ಸಮಸ್ಯೆಗಳ ಸ್ವರೂಪ ಮಾತ್ರ ಬೇರೆಯಾಗಿರುತ್ತದೆ. ಈ ವರ್ಗಗಳ ಮಹಿಳೆಯರೂ ಹಿಂಸೆಯಿಂದ ಹೊರತಾಗಿಲ್ಲವೆನ್ನುವುದನ್ನು ಅಂಕಿ ಅಂಶಗಳೇ ಹೇಳುತ್ತವೆ. ಆದರೆ ಯಾವುದೇ ಸರಕಾರ ಅಂಥ ಮಹಿಳೆಯರ ಕೂಗಿಗೆ ಕಿವಿಗೊಟ್ಟುದಿಲ್ಲ ; ಅವರ ಸಮಸ್ಯೆಗಳಿಗೆ ಕಣ್ಣು ತೆರೆದುದಿಲ್ಲ. ಅವು ತಮ್ಮ ಸರಕಾರದ ಆರ್ಥಿಕ ಪರಿಸ್ಥಿತಿಯನ್ನು ಹೆಂಡ-ಸಾರಾಯಿ -ಗಳಿಂದಲೇ ಉತ್ತಮಪಡಿಸಿಕೊಳ್ಳಲು ಪ್ರಯತ್ನಿಸುತ್ತವೆ. ಅದರಿಂದಾಗುವ ಯಾವುದೇ ಕೆಟ್ಟ ಪರಿಣಾಮಗಳ ಕಡೆಗಮನ ಹರಿಸುವ ತಾಳ್ಮೆ, ಕಾಳಜಿ, ವ್ಯವಧಾನಗಳು ಅವುಗಳಿಗೆಂದೂ ಇದ್ದಂತಿಲ್ಲ. ಇತ್ತೀಚೆಗೆ ನಮ್ಮ ರಾಜ್ಯ ಸರಕಾರವು ಸಾರಾಯಿಯನ್ನು ನಿಗದಿತ ಅಂಗಡಿಗಳಲ್ಲಿ ಮಾತ್ರವಲ್ಲದೆ ಇತರ ಅಂಗಡಿಗಳಲ್ಲೂ ಮಾರಾಟಕ್ಕೆ ಒದಗಿಸಿಕೊಡಬೇಕೆಂದು ತೆಗೆದುಕೊಂಡ ನಿರ್ಧಾರವೇ ಮೇಲಿನ ಮಾತುಗಳಿಗೆ ಸಾಕ್ಷಿಯಾಗಿದೆ. ಇದಕ್ಕೆ ವಿರೋಧೀ ದನಿಗಳು ಇಲ್ಲದಿಲ್ಲ ; ಅದು ಎಂದಿಗೂ ಸಾಯುವುದಿಲ್ಲ ಎನ್ನುವುದಕ್ಕೆ ಇತ್ತೀಚಿನ ವರ್ಷಗಳಲ್ಲಿ ನಡೆದ ಸಾರಾಯಿ ವಿರೋಧಿ ಚಳವಳಿಗಳೇ ಸಾಕ್ಷಿಯಾಗಿವೆ. ಅವುಗಳ ಮುಂಚೂಣಿಯಲ್ಲಿ ಮಹಿಳೆಯರೇ ಇದ್ದರೆನ್ನುವುದು ಮೇಲಿನ ಮಾತುಗಳಿಗೆ ಪುಷ್ಟಿ ನೀಡುತ್ತದೆ. ಅವುಗಳ ಒಂದು ಸಮೀಕ್ಷೆ ಇಲ್ಲಿದೆ.

### ಪಿರಿಯಾಪಟ್ಟಣ :

### ಬೂದಿತಿಟ್ಟು

*1993 ನೇ ಇಸವಿ. ಆಗಸ್ಟ್, ಸೆಪ್ಟೆಂಬರ್ ತಿಂಗಳ ಮಳೆಗಾಲ.* ಪಿರಿಯಾಪಟ್ಟಣ ಮೈಸೂರು ಜಿಲ್ಲೆಗೆ ಸೇರಿದ ಒಂದು ತಾಲ್ಲೂಕು. ಈ ತಾಲ್ಲೂಕಿನ ಒಂದು ಗ್ರಾಮವೇ ಬೂದಿತಿಟ್ಟು. ಜಿಲ್ಲೆಯ ಎಲ್ಲೆಡೆ ಸಾಕ್ಷರತಾ ಆಂದೋಲನ. ಕಾರ್ಯಕ್ರಮವನ್ನು

ಹಮ್ಮಿಕೊಳ್ಳಲಾಗಿತ್ತು. ಬೂದಿತಿಟ್ಟು ಇದಕ್ಕೆ ಹೊರತಾಗಿರಲಿಲ್ಲ. ಅಲ್ಲಲ್ಲಿ ಸಾಕ್ಷರತಾ ಘೋಷಣೆಗಳು ರಾರಾಜಿಸುತ್ತಿದ್ದವು ; ಕಲಿಕಾ ಕೇಂದ್ರಗಳು ಆರಂಭವಾಗಿದ್ದವು. ಅಂಥ ಒಂದು ಕೇಂದ್ರದಲ್ಲಿ ಬಡ ಕೂಲಿಕಾರ್ಮಿಕ ಮಹಿಳೆಯರು ಕಲಿಕೆಯನ್ನು ಪ್ರಾರಂಭಿಸಿದರು. ಸಾಕ್ಷರತಾ ಕಾರ್ಯಕರ್ತರು ಮದ್ಯಪಾನದಿಂದಾಗುವ ತೊಂದರೆ, ನಷ್ಟ, ಅನಾಹುತಗಳ ಬಗ್ಗೆ ಕೇಂದ್ರದಲ್ಲಿ ಚರ್ಚಿಸತೊಡಗಿದಾಗ ತಮ್ಮ ಗಂಡಂದಿರ ಕುಡಿತದ ಚಟದಿಂದ ತೊಂದರೆಗೊಳಗಾಗಿದ್ದ ಈ ಮಹಿಳೆಯರು ಸಾರಾಯಿ ವಿರೋಧೀ ಹೋರಾಟಕ್ಕೆ ಅಣಿಯಾದರು. ಗ್ರಾಮಕ್ಕೆ ಸಾರಾಯಿ ಹೊತ್ತು ತಂದ ವಾಹನವನ್ನು ತಡೆಗಟ್ಟಿದರು ; ಸಾರಾಯಿ ಅಂಗಡಿಗಳನ್ನು ಮುಚ್ಚಿಸಿದರು. ಎರಡು ದಿನಗಳು ಊರೊಳಗೆ ಸಾರಾಯಿ ಸರಬರಾಜು ಮತ್ತು ವ್ಯಾಪಾರ, ಹಾಗೇ ಸಾರಾಯಿ ಪ್ರೇಮಿಗಳ ಮೋಜು ನಡೆಯದೆ ನಿಂತಿತು. ಈ ಹೋರಾಟಕ್ಕೆ ಸಾಕ್ಷರತಾ ಕಾರ್ಯಕರ್ತರ ಹಾಗೂ ಗ್ರಾಮದ ಕೆಲವು ಮಂದಿ ಪುರುಷರ ಬೆಂಬಲವೂ ದೊರಕಿತು. ಮಹಿಳೆಯರು ನೆಮ್ಮದಿಯಿಂದ ಕೇಂದ್ರಗಳಲ್ಲಿ ಕಲಿಕೆ ಆರಂಭಿಸಿದರು.

ಆದರೆ ಈ ನೆಮ್ಮದಿ ಬಹುಕಾಲ ಉಳಿಯಲಿಲ್ಲ. ಹೆಂಡದ ದೊರೆಗಳು ಮಹಿಳೆಯರ ಧೈರ್ಯವನ್ನು ಕುಗ್ಗಿಸಲು ತಮ್ಮದೇ ವಿಧಾನಗಳನ್ನು ಬಳಸಿಕೊಂಡರು. ಹೋರಾಟದ ಮುಂಚೂಣಿಯಲ್ಲಿದ್ದ ಮಹಿಳೆಯೊಬ್ಬಳ ಮಗನನ್ನು ಕಾರಣವಿಲ್ಲದೆ ಹಿಗ್ಗಾಮುಗ್ಗಾ ಥಳಿಸಿದರು. ಕೆಲವು ಮಹಿಳೆಯರನ್ನೇ ಬಳಸಿಕೊಂಡು ಮನೆಯಲ್ಲೇ ಸಾರಾಯಿದಂಧೆಯನ್ನು ನಡೆಸಲು ಆರಂಭಿಸಿದರು. ತಮ್ಮ ಈ ದಂಧೆಗೆ ಸರಕಾರದ ಪರವಾನಗಿ ಪಡೆದಿದ್ದೇವೆಂದು ಸಾರಿದರು.

ಇದಕ್ಕೆ ಮಹಿಳೆಯರು ತಮ್ಮದೇ ರೀತಿಯಲ್ಲಿ ಪ್ರತ್ಯುತ್ತರ ನೀಡಿದರು. ಬೂದಿತಟ್ಟಿನಿಂದ ಹಲವು ಕಿಲೋಮೀಟರುಗಳ ದೂರದಲ್ಲಿದ್ದ ತಾಲ್ಲೂಕು ಕಛೇರಿಗೆ ಮೆರವಣಿಗೆಯಲ್ಲಿ ಹೊರಟು ಕಛೇರಿಯ ಮುಂದೆ ಧರಣ ಕುಳಿತರು. ಇದರಲ್ಲಿ ಶಾಲಾ ಮಕ್ಕಳು ಪಾಲ್ಗೊಂಡರು. ಅಲ್ಲಿನ ಶಾಸಕರು ಮತ್ತು ಸಾರಾಯಿ ಅಂಗಡಿಗಳ ಮಾಲೀಕರ ವಿರುದ್ಧ ಘೋಷಣೆಗಳು ಮೊಳಗಿದವು. ತಹಶೀಲ್ದಾರರು ಬಂದು ಇವರ ಮನವಿಯನ್ನು ಸ್ವೀಕರಿಸಿದರು. ಈ ಮನವಿಯ ಒಟ್ಟು ಸಾರಾಂಶ ಹೀಗಿತ್ತು.

"ನಮ್ಮನ್ನು ಅಕ್ಷರ ಕಲೀರಿ ಎಂದು ಹೇಳುತ್ತೀರಿ. ನಾವು ದಿನವಿಡೀ ಕೂಲಿ ಮಾಡಿ ಬರ್ತೀವಿ. ನಮ್ಮ ಗಂಡಂದಿರು ಕುಡಿದು ಬಂದು ಹೊಡೀತಾರೆ ; ನಮ್ಮ ಕೂಲಿ ಹಣವನ್ನು ಕಿತ್ಕೊಂಡು ಹೋಗುತ್ತಾರೆ. ನಮ್ಮ ಮಕ್ಕಳಿಗೆ ಹೊಟ್ಟೆಗೆ ಹಿಟ್ಟಿಲ್ಲ, ಮೈಗೆ ಬಟ್ಟೆಯಿಲ್ಲ ; ಅಪ್ಪಂದಿರ ಹೊಡೆತ ತಿಂತಾರೆ, ಅವರಾಗಲೀ, ನಾವಾಗಲೀ ಕಲಿಯೋದಾದ್ರೂ ಹೇಗೆ ನಮ್ಮ ಗಂಡಂದಿರು ಕುಡಿಯೋದನ್ನ ಬಿಡಲ್ಲ ಅಂತಾರೆ. ಹೋಗಲಿ ಆ ಅಂಗಡಿಗಳನ್ನಾದರೂ ದೂರ ಇಡಿ. ಮನೆಗೆ ಬರೋ ಹೊತ್ತಿಗೆ ಕುಡಿದ ಅಮಲಾದರೂ ಇಳಿದಿರುತ್ತೆ !"

ಇನ್ನೆರಡೇ ದಿನಗಳಲ್ಲಿ ಪರಿಸ್ಥಿತಿ ಬೇರೆಯೇ ಆಗಿತ್ತು. ತಹಶೀಲ್ದಾರರ ಕಛೇರಿಗೆ ಮನವಿ ಸಲ್ಲಿಸಲು ಹೋಗಿದ್ದ ಮಹಿಳೆಯರ ಗಂಡಂದಿರೆಲ್ಲಾ ಕಂಠಪೂರ್ತಿ ಕುಡಿದಿದ್ದರು. ಇದರ ಹಿನ್ನೆಲೆಯಲ್ಲಿ ಸಾರಾಯಿ ದೊರೆಗಳು ಈ ಕುಡುಕ ಗಂಡಂದಿರಿಗೆ ತಮ್ಮ ಹೆಂಡಂದಿರ ಮೇಲಿನ ನಿಯಂತ್ರಿಸುವ ಹಕ್ಕುಗಳನ್ನು ನೆನಪಿಸಿಬಿಟ್ಟಿದ್ದರು. ಅವರು ತಮ್ಮ ಹಕ್ಕನ್ನು ಸರಿಯಾಗಿ ಚಲಾಯಿಸದಿದ್ದುದೇ ಅಂದಿನ ಪರಿಸ್ಥಿತಿಗೆ ಕಾರಣವೆನ್ನುವುದನ್ನು ಮನವರಿಕೆ ಮಾಡಿಸಿದರು. ಹೀಗಾಗಿ ಗಂಡಸರು ತಮ್ಮ ಹೆಂಡಂದಿರಿಗೆ ಹೊಡೆಯುವ ಮೂಲಕ ತಮ್ಮ ಹಕ್ಕನ್ನು ಪ್ರದರ್ಶಿಸಿದರು. ಸಾರಾಯಿ ವಿರೋಧೀ ಹೋರಾಟದಲ್ಲಿ ಪಾಲ್ಗೊಳ್ಳದ ಮಹಿಳೆಯರನ್ನು ಈ ಮಹಿಳೆಯರ ವಿರುದ್ಧ ಎತ್ತಿಕಟ್ಟಿದರು. ಒಟ್ಟಾರೆಯಾಗಿ ಸಾರಾಯಿ ಅಂಗಡಿ ಮುಚ್ಚಿಸುವ ಕೆಲಸ ಮಾಡಿದ್ದು ಒಂದು ಮಹಾಪರಾಧವೆನ್ನುವ ವಾತಾವರಣ ಗ್ರಾಮದಲ್ಲಿ ನಿರ್ಮಾಣವಾಯಿತು. ಕಲಿಕಾ ಕೇಂದ್ರದ ಕಾರ್ಯಕರ್ತೆಗೆ ಅತ್ಯಾಚಾರದ ಬೆದರಿಕೆಯನ್ನೂ ಹಾಕಲಾಯಿತು.

ಇಂಥ ಪರಿಸ್ಥಿತಿಯಲ್ಲಿ ಸಾರಾಯಿ ವಿರೋಧಿ ಹೋರಾಟ ಬಹುಕಾಲ ಮುಂದುವರಿಯುವಂತಿರಲಿಲ್ಲ. ಒಂದು ದಿನದ ಧರಣಿಯೆಂದರೆ ಇಡೀ ದಿನದ ಉಪವಾಸ. ಅದರೊಂದಿಗೆ ಸಾರಾಯಿ ದೊರೆಗಳ ಭಂಡತನ ಮತ್ತವರು ಬಳಸುವ ವಾಮಮಾರ್ಗಗಳು, ರಾಜಕಾರಣಿಗಳ ಅಸ್ಪಷ್ಟ ನಿಲುವು, ಅಧಿಕಾರಿಗಳ ನಿಷ್ಕ್ರಿಯತೆ ಮುಂತಾದವು ಪಿರಿಯಾಪಟ್ಟಣದ ಬೂದಿತಿಟ್ಟಿನ ಮಹಿಳೆಯರ ಸಾರಾಯಿ ವಿರೋಧಿ ಹೋರಾಟವನ್ನು ಕೆಲವೇ ದಿನಗಳಲ್ಲಿ ತಣ್ಣಗಾಗಿಸಿದ್ದವು. ಸಾರಾಯಿ ಅಂಗಡಿಗಳು ಬಹುಬೇಗ ಎಂದಿನ ಚಟುವಟಿಕೆಗಳಲ್ಲಿ ತೊಡಗಿದ್ದವು.

ಮೇಲಿನ ಹೋರಾಟ ಮೇಲು ನೋಟಕ್ಕೆ ನಿಷ್ಫಲ - ಪ್ರಯತ್ನವೆನ್ನಿಸಬಹುದಾದರೂ ನಂತರದ ಬೆಳವಣಿಗೆಗಳನ್ನು ಕಂಡಾಗ ಹಾಗೆನ್ನಲು ಬರುವುದಿಲ್ಲ. ಆ ಹೋರಾಟ ಕೆಲವೇ ದಿನಗಳದಾದರು ಅದನ್ನು ದೂರದಿಂದ ಗಮನಿಸುತ್ತಿದ್ದವರು ಸಾವಿರಾರು ಮಂದಿಯಾದರೆ, ಹತ್ತಿರದಿಂದ ಕಂಡವರು, ಪ್ರೇರಣೆ ನೀಡಿದವರು ಹಲವರು. ಕಾರಣ, ಇಲ್ಲಿಯ ಮಾಧ್ಯಮಗಳು. ಸಾಕ್ಷರತಾ ಕಾರ್ಯಕ್ರಮ ಹಮ್ಮಿಕೊಂಡ ಅವಧಿಯಲ್ಲೇ ನಡೆದ ಈ ಹೋರಾಟ ಇಡೀ ಜಿಲ್ಲೆಯ ಕಾರ್ಯಕರ್ತರ ಗಮನವನ್ನು ಸೆಳೆದಿತ್ತು ಮಾತ್ರವಲ್ಲ, ಅದಕ್ಕೆ ಹೊಂದಿಕೊಂಡಂತಿದ್ದ ಹಲವು ಪ್ರಗತಿಪರ ಸಂಘಟನೆಗಳು ಮತ್ತು ಕಾರ್ಯಕರ್ತರ ಕುತೂಹಲವನ್ನು ಕೆರಳಿಸಿತ್ತು. ಇದು ಇನ್ನೊಂದು ನೆಲ್ಲೂರು ಜಿಲ್ಲೆಯಾಗಬಹುದೇ ಎನ್ನುವ ನಿರೀಕ್ಷೆಯನ್ನೂ ಹುಟ್ಟಿಸಿತ್ತು. ಆದರೆ ಹಾಗೇನಾಗಲಿಲ್ಲ ಬದಲಿಗೆ ಇದರಿಂದ ಹಲವು ಗ್ರಾಮಗಳು

ಸ್ಫೂರ್ತಿ ಪಡೆದವು. ಗ್ರಾಮ ಪಂಚಾಯಿತಿಯ ಮುಖಂಡರು ತಮ್ಮ ಗ್ರಾಮಗಳಲ್ಲಿ ಸಾರಾಯಿ ಮಾರಾಟವನ್ನು ನಿಷೇಧಿಸಿರುವುದಾಗಿ ಸ್ವಯಂ ಘೋಷಣೆ ಮಾಡಿಕೊಂಡರು. ಇತ್ತ ಕೆಲವು ರಾಜಕಾರಣಿಗಳು ತಮ್ಮ ಸರಕಾರ ಸಾರಾಯಿ ಮಾರಾಟ ನಿಷೇಧ ಮಾಡುವ ಯೋಚನೆಯಲ್ಲಿದೆಯೆಂದು ಅದಕ್ಕೆ ತಮ್ಮದೇ ಗಡುವು ಹಾಕಿಕೊಳ್ಳುವ ದಿಕ್ಕಿನಲ್ಲಿ ಸಾಗುತ್ತಿದೆ ಎಂದು ಸುದ್ದಿ ಮಾಡುವ ಮೂಲಕ ನೊಂದ ಮಹಿಳೆಯರು ಮತ್ತು ಮಹಿಳಾ ಸಂಘಟನೆಗಳನ್ನು ಓಟಿನ ಬ್ಯಾಂಕುಗಳನ್ನಾಗಿಸಿಕೊಳ್ಳುವ ಹುನ್ನಾರ ಹೂಡಿದರು. ಅದೇ ವರ್ಷದ ಆಜುಬಾಜಿನಲ್ಲಿ ರಾಜ್ಯ ರೈತ ಸಂಘದ ನೇತೃತ್ವದಲ್ಲಿ ಮಹಿಳೆಯರು ಮಂಡ್ಯ ಜಿಲ್ಲೆಯಲ್ಲಿ ಸಾರಾಯಿ ವಿರೋಧಿ ಹೋರಾಟವನ್ನು ಸಾಂಕೇತಿಕವಾಗಿ ಹಮ್ಮಿಕೊಂಡರು. ಇವರು ನಡೆಸಿದ ಮೆರವಣಿಗೆ, ಧರಣಿ, ಘೋಷಣೆಗಳು, ಮನವಿಗಳ ಪರಿಣಾಮ ಜನಜೀವನದ ಮೇಲೆ, ಸರಕಾರದ ನೀತಿಯ ಮೇಲೆ ಉಂಟಾದಂತೆ ಕಂಡುಬರಲಿಲ್ಲ ಕೆಲವು ವರ್ಷಗಳವರೆಗೆ ಎಲ್ಲವೂ ಯಥಾಸ್ಥಿತಿಯಲ್ಲಿ ಮುಂದುವರಿಯುತ್ತಾ ಬರುತ್ತಿರುವಾಗ ಮತ್ತೊಮ್ಮೆ ಮಹಿಳೆಯರು ಅಂಥ ಸಾಹಸಕ್ಕೆ ಹೋರಾಟಕ್ಕೆ ಮುಂದಾಗಿದ್ದು ಏಳೆಂಟು ವರ್ಷಗಳ ಅಂತರದಲ್ಲಿ ; 2001 ನೇ ವರ್ಷದಲ್ಲಿ.

## ಚಾಮರಾಜನಗರ : ಪುಣಜನೂರು

ಇತ್ತೀಚಿನವರೆಗೂ ಮೈಸೂರು ಜಿಲ್ಲೆಯ ಭಾಗವೇ ಆಗಿದ್ದ ಚಾಮರಾಜನಗರ ಈಗ ಜಿಲ್ಲೆಯ ಸ್ಥಾನಮಾನವನ್ನು ಪಡೆದುಕೊಂಡಿದೆ. ರಾಜ್ಯದ ಅತ್ಯಂತ ಹಿಂದುಳಿದ ಜಿಲ್ಲೆಗಳ ಸಾಲಿಗೆ ಸೇರುತ್ತದಾದರೂ ತನ್ನ ಅರಣ್ಯ ಸಂಪತ್ತಿನಿಂದಾಗಿ ಶ್ರೀಮಂತ ಜಿಲ್ಲೆ ಎನ್ನಬಹುದಾಗಿದೆ. ಇಲ್ಲಿಯ ಗುಡ್ಡಗಾಡು ಪ್ರದೇಶಗಳಾದ ಮಲೆಮಹದೇಶ್ವರ ಬೆಟ್ಟ, ಬಿಳಿಗಿರಿರಂಗನ ಬೆಟ್ಟ, ಗೋಪಾಲಸ್ವಾಮಿ ಬೆಟ್ಟ ಹಾಗೂ ಪುಣಜನೂರು ಅರಣ್ಯಗಳು ಸಂರಕ್ಷಿತ ಅರಣ್ಯ ಪ್ರದೇಶಗಳಾಗಿವೆ. ಇಲ್ಲಿ ತಮಿಳುನಾಡು, ಕೇರಳ ಗಡಿರಾಜ್ಯಗಳ ಕಡೆ ಹಾದುಹೋಗುವ ಮಾರ್ಗಗಳಿವೆ. ಲಂಬಾಣಿಗಳು, ಗಿರಿಜನರು, ಹಿಂದುಳಿದ ವರ್ಗಗಳವರು, ಕೂಲಿಕಾರ್ಮಿಕರು, ಅಲ್ಪಸಂಖ್ಯಾತರು ವಾಸಿಸುವ ಈ ಪ್ರದೇಶದಲ್ಲಿ ಹಿಂದಿನ ಸರಕಾರ ಸಂಪೂರ್ಣ, ಪಾನನಿಷೇಧವನ್ನು ಹೇರಿತ್ತು. "ಆದರೆ ಇಂದು ಇಲ್ಲಿ ಅಕ್ರಮ ಸಾರಾಯಿ ದಂಧೆಗಳು ನಡೆಯುತ್ತಿವೆ. ಲಂಬಾಣಿಗಳು, ಗಿರಿಜನರು ವಾಸಿಸುವ ಹಾಡಿಗಳಲ್ಲಿ ಜನಜೀವನದ ನೆಮ್ಮದಿ ಕದಡಿದೆ ವಿವಿಧ ಪಂಗಡಗಳಿಗೆ ಸೇರಿದ ಪುರುಷರು ತಮ್ಮ ದಿನದ ಅಲ್ಪಸಂಪಾದನೆಯನ್ನು ಕುಡಿತಕ್ಕೆ ಹಾಳುಮಾಡುತ್ತಿದ್ದಾರೆ. ಕುಟುಂಬಗಳಿಗೆ ತಮ್ಮ ಸಂಪಾದನೆಯಲ್ಲಿ ಏನನ್ನೂ ಉಳಿಸದೆ, ಹೆಂಡತಿ-ಮಕ್ಕಳಿಗೆ ತಾವೇ ಭಾರವಾಗಿದ್ದಾರೆ ; ಅಷ್ಟೇ ಅಲ್ಲದೆ ತಮ್ಮ ಕುಡಿದ ಮತ್ತಿನಲ್ಲಿ ಅವರನ್ನು ಹಿಂಸಿಸುವ ಮೂಲಕ ಅವರ ಪಾಲಿಗೆ ನರರಾಕ್ಷಸರಾಗಿದ್ದಾರೆ. ಕುಟುಂಬಗಳು ದಿವಾಳಿಯಾಗುತಿದ್ದರೆ, ಭೂಗತ ದೊರೆಗಳು ತಳಊರುತ್ತಿದ್ದಾರೆ. ಇದರಿಂದ ತನಗೆ ಆದಾಯ ಬರುತ್ತಿದೆಯೆಂಬ ಭ್ರಮೆಯಲ್ಲಿರುವ ಸರಕಾರಕ್ಕೆ ನಷ್ಟವೇ ಆಗುತ್ತಿದೆ ಎನ್ನುವುದು ಜನಾಭಿಪ್ರಾಯವಾಗಿದೆಯೆಂದು ಪತ್ರಿಕೆಗಳು ವರದಿ ಮಾಡಿದ್ದವು. ಇದಕ್ಕೆ ಪುಷ್ಟಿ ದೊರೆತಂತೆ 2001ನೇ ವರ್ಷ ಮಹಿಳಾ ಜಾಗೃತಿ ವರ್ಷವಾಗಿ ಪರಿಣಮಿಸಿತು. ಇದಕ್ಕೆ ಜಿಲ್ಲೆಯ ಹಲವೆಡೆ ನಡೆದ ಸಾರಾಯಿ ವಿರೋಧೀ ಹೋರಾಟಗಳು ಸಾಕ್ಷಿಯಾದವು.

ಕರ್ನಾಟಕ - ತಮಿಳುನಾಡು ರಾಷ್ಟ್ರೀಯ ಹೆದ್ದಾರಿಗೆ ಸೇರಿದ ಊರು ಪುಣಜನೂರು. ಇದು 2001ರ ಜುಲೈ ತಿಂಗಳ ಮೊದಲ ವಾರದಲ್ಲಿ ಸಾರಾಯಿ ವಿರೋಧಿ ಹೋರಾಟದ ಮುಂಚೂಣಿಯಲ್ಲಿತ್ತು ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಬರುವ ವಿವಿಧ ಮಹಿಳಾ ಸಂಘಟನೆಗಳು ಮೊಟ್ಟಮೊದಲಿಗೆ ತಮ್ಮ ಹೋರಾಟವನ್ನು ಗ್ರಾಮಸ್ಥರ ನೆರವಿನೊಂದಿಗೆ ಹಂತಹಂತವಾಗಿ ಆರಂಭಿಸಿದವು. ಮೊದಲ ಹಂತವಾಗಿ, ತಮ್ಮ ಕುಟುಂಬಗಳನ್ನೇ ನಾಶಮಾಡುತ್ತಿರುವ ಸಾರಾಯಿ ಅಂಗಡಿಗಳ ಪರವಾನಗಿಗಳನ್ನು ರದ್ದುಪಡಿಸಲು ಒತ್ತಾಯಿಸುವ ಕಾರ್ಯಯೋಜನೆಯನ್ನು ಮಹಿಳೆಯರು ಹಾಕಿಕೊಂಡರು. ಅದಕ್ಕಾಗಿ ಜಿಲ್ಲಾಧಿಕಾರಿಗಳ ಕಚೇರಿ ಮತ್ತ ವರಮನೆಯ ಮುಂದೆ ಪ್ರತಿಭಟನಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಅನಾರೋಗ್ಯದ ಕಾರಣ ನೀಡಿ ಪ್ರತಿಭಟನಾಕಾರರನ್ನು ಭೇಟಿಯಾಗಲು ನಿರಾಕರಿಸಿದ ಜಿಲ್ಲಾಧಿಕಾರಿಗಳು, ಮಹಿಳೆಯರು ತಾವು ಜಿಲ್ಲಾಧಿಕಾರಿಗಳನ್ನು ಭೇಟಿಯಾಗದ ಹೊರತು ಆ ಸ್ಥಳಬಿಟ್ಟು ಕದಲುವುದಿಲ್ಲವೆಂದು ನಿರ್ಧರಿಸಿದಾಗ, ಒತ್ತಡಕ್ಕೆ ಮಣಿದು ಭೇಟಿ ನೀಡಿದರು. ಆದರೆ ಸಾರಾಯಿ ಅಂಗಡಿಗಳ ಪರವಾನಗಿಗಳನ್ನು ರದ್ದು ಪಡಿಸುವ ಬೇಡಿಕೆಗೆ ಅವರು ತಮ್ಮ ಅಧಿಕಾರವ್ಯಾಪ್ತಿಗೆ ಅದು ಒಳಪಡುವುದಿಲ್ಲವೆಂಬ ಹಾರಿಕೆಯ ಉತ್ತರ ನೀಡಿ ನುಣುಚಿಕೊಳ್ಳುವ ಪ್ರಯತ್ನ ಮಾಡಿದರು. ಇದರಿಂದ ಕುಪಿತರಾದ ಮಹಿಳೆಯರು ತಮ್ಮ ಚಳವಳಿಯನ್ನು ಮುಂದುವರೆಸುವ ಹಾಗೂ ಅದಕ್ಕೆ ತೀವ್ರಸ್ವರೂಪವನ್ನು ನೀಡುವ ದಿಕ್ಕಿನಲ್ಲಿ ಚಿಂತಿಸಿದರು.

ಮರುದಿನ ಅಂದರೆ ಜುಲೈ 11 ರಂದು ಚಳವಳಿಯ ಸ್ವರೂಪ ವಿಭಿನ್ನವಾಗಿತ್ತು. ಮಹಿಳೆಯರ ಸಂಖ್ಯೆ ಸಾವಿರಕ್ಕೇರಿತ್ತು. ರಾಷ್ಟ್ರೀಯ ಹೆದ್ದಾರಿಯಾದ ಪುಣಜನೂರು ಚೆಕ್‌ಪೋಸ್ಟ್ ಬಳಿಯ ಮುಖ್ಯರಸ್ತೆಯಲ್ಲಿ ಮಹಿಳೆಯರು ಸಾಲುಸಾಲಾಗಿ ಕುಳಿತರು. ಹೆದ್ದಾರಿಗೆ ಬಂದ ವಾಹನಗಳು ಮುಂದೆ ಸಾಗದೆ ಬಂದಂತೆಯೇ ಹಿಂದಿರುಗಿದವು. ರಸ್ತೆ ಬದಿಯ ಟೀ ಅಂಗಡಿಗಳು, ಹೋಟೆಲ್ಲುಗಳು ಮತ್ತಿತರ ಅಂಗಡಿಗಳು ಮುಚ್ಚಿಕೊಂಡವು. ಸಾರಾಯಿ ಅಂಗಡಿಗಳ ಪರವಾನಗಿಗಳ ರದ್ದತಿಗೆ ನಿರಾಕರಿಸಿದ ಅಬಕಾರಿ ಅಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳ ವಿರುದ್ಧದ

ಘೋಷಣೆಗಳು ಮುಗಿಲು ಮುಟ್ಟಿದವು. ರಸ್ತೆ ಬದಿಯಲ್ಲಿಯೇ ಮಹಿಳೆಯರು ಮಕ್ಕಳಿಗೆ ಊಟ ಸಿದ್ಧವಾಯಿತು ರಸ್ತೆಯ ಮೇಲೆ ಸಾವಿರಾರು ಮಂದಿಯ ಊಟ ಅಚ್ಚುಕಟ್ಟಾಗಿ ನಡೆಯಿತು.

ಈಗ ಚಳವಳಿಯ ಬಿಸಿ ಅಧಿಕಾರಿಗಳಿಗೆ ತಟ್ಟತೊಡಗಿತ್ತು ರಾಷ್ಟ್ರೀಯ ಹೆದ್ದಾರಿಯಲ್ಲಿ ಸಂಚಾರ ವ್ಯವಸ್ಥೆ ಸಂಪೂರ್ಣವಾಗಿ ಅಸ್ತವ್ಯಸ್ತಗೊಂಡಿತ್ತು. ಕರ್ನಾಟಕ - ತಮಿಳುನಾಡಿನ ಮಾರ್ಗದಲ್ಲಿ ಬಸ್ಸುಗಳ ಓಡಾಟಗಳಿಲ್ಲದೆ ಪ್ರಯಾಣಿಕರು ಪರದಾಡಿದರು. ತಮ್ಮ ಬೇಡಿಕೆಗಳು ಪೂರೈಸದೆ ಮಹಿಳೆಯರು ಅಲ್ಲಿಂದ ಕದಲುವ ಸೂಚನೆಯಿರಲಿಲ್ಲ. ಹೀಗಾಗಿ ಕೆಲವರು ನಡೆದೇ ಊರುಗಳನ್ನು ಸೇರಬೇಕಾಯಿತು. ಮಹಿಳೆಯರು ಯಾರ ಕಷ್ಟಕ್ಕೂ ಸ್ಪಂದಿಸದ ಸ್ಥಿತಿ ತಲುಪಿದರು. ತಮ್ಮ ಕುಟುಂಬಗಳ ಸರ್ವನಾಶ ಮಾಡುತ್ತಿರುವ ಸಾರಾಯಿ ಅಂಗಡಿಗಳ ನಾಶಮಾಡದ ಹೊರತು ಅವರ ಮನಕ್ಕೆ ಶಾಂತಿ ಸಿಗದಂತಾಗಿತ್ತು. ಬಿಸಿಲಿನಧಗೆಯನ್ನು ಶಮನಗೊಳಿಸುವಂತೆ ತುಂತುರು ಮಳೆ ಹನಿಯಿತು. 'ಬ್ರಾಂದಿ ಅಂಗಡಿ ಸಹವಾಸ, ಹೆಂಡತಿ-ಮಕ್ಕಳ ಉಪವಾಸ ಬ್ರಾಂದಿ ಬೇಡ, ಮುದ್ದೆ ಬೇಕು' ಸಾರಾಯಿ ಲಾಬಿಗೆ ಮುಳುಗಿರುವ ಜಿಲ್ಲಾಧಿಕಾರಿಗೆ ಧಿಕ್ಕಾರ ಮುಂತಾದ ಘೋಷಣೆಗಳು ನಿದ್ರಿಸುತ್ತಾ ಕುಳಿತ ಅಧಿಕಾರಿಗಳ ಕುರ್ಚಿಗಳನ್ನು ಅಲ್ಲಾಡಿಸ ತೊಡಗಿದವು. ಪರಿಣಾಮವಾಗಿ ಸಂಜೆಯ ವೇಳೆಗೆ ಜಿಲ್ಲಾಧಿಕಾರಿಗಳ ಪರವಾಗಿ ಅಧಿಕಾರಿಯೊಬ್ಬರು ಧರಣಿ ನಿರತ ಮಹಿಳೆಯರನ್ನು ಭೇಟಿ ಮಾಡಿ,ಸಾರಾಯಿ ಅಂಗಡಿಗಳನ್ನು ಸ್ಥಳಾಂತರಿಸುತ್ತೇವೆ ; ಅಬಕಾರಿ ಅಧಿಕಾರಿಗಳಿಗೆ ಸಾರಾಯಿ ನಿಷೇಧಕ್ಕಾಗಿ ಶಿಫಾರಸು ಮಾಡುತ್ತೇವೆ ಎಂದು ಬಾಯಿಮಾತಿನ ಭರವಸೆ ನೀಡಿದರು. ಇದನ್ನು ಮಹಿಳೆಯರು ನಂಬಿ ತಮ್ಮ ನಾಲ್ಕು ದಿನಗಳ ಸತತ ಪ್ರತಿಭಟನಾ ಚಳವಳಿಗೆ ಅಂತ್ಯ ಹಾಡಿದರು. ಇದೊಂದು ಅಭೂತಪೂರ್ವ ಚಳವಳಿ ಎಂದು ಮಾಧ್ಯಮಗಳು ಬಣ್ಣಿಸಿದವು. ಮಹಿಳೆಯರ ಸಂಘಟಿತ ಪ್ರಯತ್ನಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿತ್ತು.

ಸಾರಾಯಿ ನಿಷೇಧದ ಈ ಹೋರಾಟದಲ್ಲಿ ಹಲವು ಮಹಿಳಾ ಸಂಘಟನೆಗಳು ಭಾಗವಹಿಸಿದ್ದವು. ಅವೆಂದರೆ, ಮಲೈಮಹದೇಶ್ವರ ಮಹಿಳಾ ಸಂಘ, ಸ್ತ್ರೀ ಶಕ್ತಿ ಮಾರಮ್ಮನ ಮಹಿಳಾ ಸಂಘ, ಸ್ತ್ರೀಶಕ್ತಿ ಕುಂಭೇಶ್ವರ ಸಂಘ, ವಿದ್ಯಾ ಮಹಿಳಾ ಸಂಘ, ಸ್ತ್ರೀಶಕ್ತಿ ಚೌಡೇಶ್ವರಿ ಮಹಿಳಾ ಸಂಘ, ಲಕ್ಷ್ಮಿ ಮಹಿಳಾ ಸಂಘ, ಸ್ತ್ರೀಶಕ್ತಿ ಮುನೇಶ್ವರ ಸ್ವಾಮಿ ಮಹಿಳಾ ಸಂಘ, ಮುನೇಶ್ವರ ಕಾಲೊನಿಯ ಸಂಪಿಗೆ ಮಹಿಳಾ ಸಂಘ, ಮೂಕನಪಾಳ್ಯದ ಲಕ್ಷ್ಮೀಸೇವಾ ಸ್ವಸಹಾಯ ಸಂಘ, ತೊಳದ ಸ್ವಸಹಾಯ ಸಂಘ, ಚಿಕ್ಕದೇವಮ್ಮ ಸ್ವಸಹಾಯ ಸಂಘ, ಕಟ್ಟಾಳಮ್ಮ ಸ್ವಸಹಾಯ ಸಂಘ, ಜೆಡೆರುದ್ರ ಸ್ವಸಹಾಯ ಸಂಘ, ಜ್ಯೋತಿ ಸ್ವಸಹಾಯ ಸಂಘ ಮುಂತಾದವು. ಇವುಗಳಲ್ಲದೆ ಹಲವು ಮಂದಿ ಪುರುಷರೊಂದಿಗೆ ಶಾಲಾ ವಿದ್ಯಾರ್ಥಿಗಳು ಭಾಗವಹಿಸಿದ್ದುದೊಂದು ಇಲ್ಲಿಯ ವಿಶೇಷ.

## ಬಿಸಲವಾಡಿ

ಪುಣಜನೂರಿನ ಸಾರಾಯಿ ವಿರೋಧಿ ಚಳವಳಿಯಿಂದ ಪ್ರೇರಿತರಾಗಿಯೋ ಎಂಬಂತೆ ಒಂದೇ ವಾರದ ಅವಧಿಯಲ್ಲಿ ಇದೇ ತಾಲ್ಲೂಕಿನ ಬಿಸಲವಾಡಿ ಎಂಬ ಗ್ರಾಮದ ಮಹಿಳೆಯರು ಸಾರಾಯಿ ವಿರೋಧೀ ಹೋರಾಟವನ್ನು ತಮ್ಮ ಗ್ರಾಮದಲ್ಲಿ ಹಮ್ಮಿಕೊಂಡರು (ಯೋಜಿಸಿದರು). ಇದರಲ್ಲಿ ಗ್ರಾಮದ ಶ್ರೀಲಕ್ಷ್ಮೀದೇವಿ ಮಹಿಳಾ ಸಹಾಯಕ ಸಂಘದ ಸದಸ್ಯರಲ್ಲದೆ, ಶ್ರೀ ಬಣ್ಣಾರಿ ಅಮ್ಮನ ಕಲ್ಲು ಒಡೆಯುವ ಕೂಲಿ ಕಾರ್ಮಿಕರು, ಗ್ರಾಮ ಪಂಚಾಯಿತಿ ಸದಸ್ಯೆ ಪಂಕಜಮ್ಮ ಮತ್ತಿತರ ಗ್ರಾಮಸ್ಥರು ಊರಿನ ಪ್ರಮುಖ ಬೀದಿಗಳಲ್ಲಿ ಸಾರಾಯಿ ವಿರೋಧೀ ಘೋಷಣೆಗಳೊಂದಿಗೆ ಮೆರವಣಿಗೆ ನಡೆಸಿದರು ; ಆ ಮೂಲಕ ಗ್ರಾಮಸ್ಥರಲ್ಲಿ ಸಾರಾಯಿಯಿಂದಾಗುವ ಕೆಟ್ಟ ಪರಿಣಾಮಗಳ ಬಗ್ಗೆ ಅರಿವನ್ನು ಮೂಡಿಸಿದರು. ಅಲ್ಲದೆ ಕಣ್ಣಿಗೆ ಬಿದ್ದ ಸಾರಾಯಿ ಅಂಗಡಿಯೊಂದಕ್ಕೆ ಬೀಗ ಜಡಿದರು. ಹೀಗೆ ಪ್ರತಿಭಟನೆ ನಡೆಯುತ್ತಿದ್ದಾಗಲೇ ಸಾರಾಯಿ ಹೊತ್ತು ತಂದ ಟೆಂಪೊವೊಂದನ್ನು ಅಡ್ಡಗಟ್ಟಿದರು. 'ಇನ್ನು ಮುಂದೆ ನಮ್ಮ ಗ್ರಾಮದಲ್ಲಿ ಮತ್ತು ಬಂದೀಗೌಡನಹಳ್ಳಿ ಎಂಬ ಗ್ರಾಮದಲ್ಲಿ ಸಾರಾಯಿ ಮಾರಾಟಕ್ಕೆ ಅವಕಾಶವನ್ನು ನೀಡುದಿಲ್ಲ' ಎಂದೂ, ವಾಹನವನ್ನು ಬಂದ ದಾರಿಯಲ್ಲೇ ವಾಪಸು ತೆಗೆದುಕೊಂಡು ಹೋಗುವಂತೆ ವಾಹನದಲ್ಲಿದ್ದವರಿಗೆ ತಾಕೀತು ಮಾಡಿದರು. ಅವರು ಎಷ್ಟೇ ಬೇಡಿಕೊಂಡರೂ ಪ್ರತಿಭಟನಕಾರು ಜಗ್ಗದಾಗ ವಾಹನವು ಬಂದಂತೆಯೇ ಹಿಂದಿರುಗಿತು.

ಪ್ರತಿಭಟನೆಯ ಮುಂಚೂಣಿಯಲ್ಲಿದ್ದ ಸಂಘದ ಅಧ್ಯಕ್ಷೆ ಪುಟ್ಟಮ್ಮ, ಗ್ರಾಮ ಪಂಚಾಯಿತಿ ಸದಸ್ಯೆ ಪಂಕಜಮ್ಮ, ಕೂಲಿಕಾರ್ಮಿಕ ಸಂಘದ ನಾಗರಾಜ ಮುಂತಾದವರು ಸಾರಾಯಿ ಮಾರಾಟವನ್ನು ನಿಲ್ಲಿಸದಿದ್ದಲ್ಲಿ ಉಗ್ರಹೋರಾಟವನ್ನು ಮಾಡುವುದಾಗಿ ಸಾರಾಯಿ ಮಾರಾಟಗಾರರಿಗೆ ಎಚ್ಚರಿಕೆಯನ್ನು ನೀಡಿದರು. ಈ ಪ್ರತಿಭಟನೆಯಲ್ಲಿ ನೂರಕ್ಕೂ ಹೆಚ್ಚು ಮಂದಿ ಮಹಿಳೆಯರು ಪಾಲ್ಗೊಂಡಿದ್ದರು.

ಹೀಗೆ ತಮ್ಮ ಉಗ್ರ ಮತ್ತು ಸಂಘಟಿತ ಪ್ರತಿಭಟನೆಗಳ ಫಲವಾಗಿ ಸಿಕ್ಕ ನೆಮ್ಮದಿ ಪುಣಜನೂರಿನ ಮತ್ತು ಬಿಸಲವಾಡಿಯ ಮಹಿಳೆಯರಿಗೆ ಬಹುಕಾಲ ಉಳಿಯಲಿಲ್ಲ. ಅವರು ಬಲವಂತವಾಗಿ ಮುಚ್ಚಿಸಿದ ವೈನ್ ಶಾಪುಗಳು ಒಂದೇ ತಿಂಗಳ ಅಂತರದಲ್ಲಿ ಮತ್ತೆ ಒಂದೊಂದೇ ತೆರೆದುಕೊಂಡವು. ಸಹಜವಾಗಿಯೋ ಇದರಿಂದ ಕುಪಿತರಾದ ಪುಣಜನೂರು ಮತ್ತಿತರ ಸುತ್ತಮುತ್ತಲ ಗ್ರಾಮಗಳ ಮಹಿಳೆಯರು ಆಗಸ್ಟ್ ತಿಂಗಳ 24ರಂದು ಗ್ರಾಮ ಪಂಚಾಯಿತಿ ಕಛೇರಿಗೆ ಮುತ್ತಿಗೆ ಹಾಕಿದರು ; ಪಂಚಾಯಿತಿ ಸಭೆ ನಡೆಯದಂತೆ ಅಡ್ಡಿಪಡಿಸಿದರು. ಪಂಚಾಯಿತಿ ಸದಸ್ಯರು ಸಾರಾಯಿ ಅಂಗಡಿಗಳ ಮಾಲೀಕರೊಂದಿಗೆ ಶಾಮೀಲಾಗಿದ್ದರೆನ್ನುವುದೇ ಅವರ ಆಕ್ರೋಶಕ್ಕೆ ಕಾರಣವಾಗಿತ್ತು. ಇವರ ಅಹವಾಲನ್ನು ಕೇಳಿದ ಪಂಚಾಯಿತಿ ಅಧ್ಯಕ್ಷೆ ಬಸಮ್ಮ, ಉಪಾಧ್ಯಕ್ಷರಾದ ಚಾಮರಾಜು

ಮತ್ತು ಸದಸ್ಯರಾದ ಕೋಣೂರೇಗೌಡ, ಸಣ್ಣ ಮಾದೇಗೌಡ, ಬಾಲೂನಾಯ್ಕ, ನಂಜೇಗೌಡ, ಪದ್ಮ ಮತ್ತಿತರರು ಪ್ರತಿಭಟನಾಕಾರರೊಂದಿಗೆ ಮದ್ಯದಂಗಡಿ ಮಾಲೀಕರ ಮನವೊಲಿಸಿದರು; ಮತ್ತೆ ಅಂಗಡಿಯನ್ನು ಮುಚ್ಚಿಸಿದರು.

ಇಷ್ಟಕ್ಕೇ ತೃಪ್ತರಾಗದ ಪ್ರತಿಭಟನಕಾರರು ಅಲ್ಲಿಂದ ಚಾಮರಾಜನಗರಕ್ಕೆ ಬಂದು ಜಿಲ್ಲಾಧಿಕಾರಿಗಳನ್ನು ಭೇಟಿ ಮಾಡಲು ಹೋದರು. ಆದರೆ ಪುಣಜನೂರಿನ ವೈನ್ ಶಾಪಿನ ಮಾಲೀಕ ಇವರಿಗಿಂತ ಮೊದಲೇ ಬಂದು ಜಿಲ್ಲಾಧಿಕಾರಿಗಳ ಬಳಿ ಕುಳಿತಿದ್ದ. ಇವರನ್ನು ಕಾಣುತ್ತಿದ್ದಂತೆಯೇ ಜಿಲ್ಲಾಧಿಕಾರಿಗಳು, ನೀವೇನು ಮಹಾ ಮಾಡಿದ್ದೀರಿ ? ಅಂಗಡಿ ಬಾಗಿಲನ್ನು ಹೇಗೆ ಮುಚ್ಚಿಸಿದಿರಿ ? ಪುಣಜನೂರಿನ ಜನ ಮೇಲಿನಿಂದ ಇಳಿದು ಬಂದಿದ್ದೀರ ಎಂದೆಲ್ಲಾ ವ್ಯಂಗ್ಯಮಾತುಗಳಾಡಿದರು. ಅಂಗಡಿ ಮಾಲೀಕರೊಂದಿಗೆ ಶಾಮೀಲಾದ ಅಧಿಕಾರಿ ತಮ್ಮ ಕರ್ತವ್ಯವನ್ನು ಮರೆತಿದ್ದರು. ಪ್ರತಿಯಾಗಿ ನೊಂದ ಮಹಿಳೆಯರು ತಮ್ಮ ಮನವಿ ಪತ್ರವೊಂದನ್ನು ಜಿಲ್ಲಾಧಿಕಾರಿಗೆ ಸಲ್ಲಿಸಿದರು ; ಜನಸಮುದಾಯದ ಅಭಿಪ್ರಾಯವನ್ನು ಧಿಕ್ಕರಿಸಿ ವೈನ್ ಶಾಪನ್ನು ಖಾಯಮ್ಮಾಗಿ ಮುಚ್ಚಿಸದಿದ್ದಲ್ಲಿ ಅವರ ವಿರುದ್ಧವೇ ಉಗ್ರಪ್ರತಿಭಟನೆಯನ್ನು ಹಮ್ಮಿಕೊಳ್ಳಲಾಗುವುದೆಂದು ಜಿಲ್ಲಾಧಿಕಾರಿಗೆ ಎಚ್ಚರಿಕೆ ನೀಡಿದರು.

ಮೇಲಿನ ಪ್ರತಿಭಟನೆಯಲ್ಲಿ ಎತ್ತೇಗೌಡನದೊಡ್ಡಿ, ಬಾನವಾಡಿ, ಕೋಳಿಪಾಳ್ಯ, ಕೋಡಿಮಡುವಿನದೊಡ್ಡಿ, ರಂಗಸಂದ್ರ, ಮುಂತಾದ ಗ್ರಾಮಗಳ ಮಹಿಳೆಯರೂ ಪಾಲ್ಗೊಂಡಿದ್ದರು.

ಕಾನೂನಿನನ್ವಯ ಶಿಕ್ಷೆಗೊಳಗಾಗದ ಪರಿಸ್ಥಿತಿಯಲ್ಲಿ ಕುಡುಕರಿಗೆ ಮಹಿಳೆಯರೇ ಶಿಕ್ಷೆ ಕೊಟ್ಟ ನಿದರ್ಶನ ಈ ಗ್ರಾಮಗಳಲ್ಲಿ ಕಾಣಬಹುದು. ಸಾರಾಯಿ ವಿರೋಧೀ ಚಳವಳಿಯ ಕಾವು ಇನ್ನೂ ಆರದಿರುವಾಗಲೇ ಕುಡಿದು ಬಂದ ವ್ಯಕ್ತಿಯೊಬ್ಬನನ್ನು ತಲೆಬೋಳಿಸಿ ಶಿಕ್ಷಿಸಿದ ಮಹಿಳೆಯರು ಆ ಮೂಲಕ ಕುಡಿದು ಬರುವವರಿಗೆ ಎಚ್ಚರಿಕೆ ನೀಡಿದ್ರು (ಪ್ರಜಾನುಡಿ: ಅ. 24) !

## ಯಳಂದೂರು : ಬಿಳಿಗಿರಿರಂಗನಬೆಟ್ಟ

ಬಿಳಿಗಿರಿರಂಗನಬೆಟ್ಟ ಯಳಂದೂರು ತಾಲ್ಲೂಕಿನಲ್ಲಿದೆ. ಇದು ಹಲವು ಕಾರಣಗಳಿಗಾಗಿ ಪ್ರಸಿದ್ಧ. ಮುಖ್ಯವಾಗಿ, ಅದರ ಹೆಸರೇ ಹೇಳುವಂತೆ ದಟ್ಟವಾದ ಕಾಡು, ಗುಡ್ಡಬೆಟ್ಟಗಳ ನಡುವೆ ಎತ್ತರದ ಸ್ಥಳದಲ್ಲಿ ಗೋಚರಿಸುವ ಬಿಳಿಗಿರಿರಂಗನ ದೇವಸ್ಥಾನ. ಅಲ್ಲದೆ ಬೆಟ್ಟದ ಸುತ್ತಮುತ್ತ ವಾಸವಾಗಿರುವ ಗಿರಿಜನರಾದ ಸೋಲಿಗ ಪಂಗಡದ ಜನರು. ಇವರಿಗಾಗಿ ಹಲವು ದಶಕಗಳಿಂದ ಹಲವು ಅಭಿವೃದ್ಧಿ ಕಾರ್ಯಕ್ರಮಗಳನ್ನು - ಆರೋಗ್ಯ, ಆರ್ಥಿಕ, ಶೈಕ್ಷಣಿಕ ಮುಂತಾದವು - ಹಮ್ಮಿಕೊಂಡು ನಿಸ್ವಾರ್ಥ ಸೇವೆ ಸಲ್ಲಿಸುತ್ತಾ ಬಂದಿರುವ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ ಎಂಬ ಸಂಸ್ಥೆ ಮತ್ತದರ ರೂವಾರಿ ಹಾಗೂ ರೈಟ್ ಲೈವ್‌ಲೀಹುಡ್ ಎಂಬ ಪ್ರತಿಷ್ಠಿತ ಅಂತಾರಾಷ್ಟ್ರೀಯ ಪ್ರಶಸ್ತಿ ವಿಜೇತರಾದ ಡಾ. ಹೆಚ್. ಸುದರ್ಶನ್‌ರವರು. ಒಟ್ಟಿನಲ್ಲಿ ಈ ಸ್ಥಳ ಭಕ್ತಾದಿಗಳ, ಸಾಮಾಜಿಕ ಸಂಶೋಧಕರ, ಸಾಮಾಜಿಕ ಕಾರ್ಯಕರ್ತರ, ಶಿಕ್ಷಣ ವೇತ್ತರ, ವಿದೇಶೀ ಪ್ರವಾಸಿಗರ, ಪ್ರಕೃತಿಪ್ರಿಯರ ಆಕರ್ಷಣಾ ಬಿಂದುವಾಗಿದೆ ಎನ್ನಬಹುದು.

ಈ ಬೆಟ್ಟದ ಸುತ್ತಮುತ್ತ ಗಿರಿಜನರ - ಒಂಬತ್ತು ಪೋಡುಗಳಿವೆ. ಈ ಪೋಡುಗಳಲ್ಲಿ ವಾಸಮಾಡುವ ಗಿರಿಜನರ ಸಂಖ್ಯೆ ಸುಮಾರು 1200 (2001 - ಪ್ರತಿಕಾವರದಿ). ಈ ಪೋಡುಗಳ ಸಮೀಪ ಬಹಳಷ್ಟು ಅಕ್ರಮ ಸಾರಾಯಿ ಘಟಕಗಳು 2001 ನೇ ಇಸವಿಯಲ್ಲಿ ತಲೆಯೆತ್ತಿದ್ದವು. ಶೇ.50ರಷ್ಟು ಮಂದಿ ಪುರುಷರು ಸಾರಾಯಿ ಕುಡಿಯುವ ದುಶ್ಚಟಕ್ಕೆ ಬಲಿಯಾಗಿದ್ದರು; ತಮ್ಮ ದಿನದ ದುಡಿಮೆಯ ಆದಾಯವನ್ನು ಸಾರಾಯಿಗೆ ಸುರಿದು ಬರಿಗೈಯಲ್ಲಿ ಮನೆಗೆ ಬರುತ್ತಿದ್ದರು. ಇದರ ಪರಿಣಾಮವಾಗಿ, ಮಹಿಳೆಯರು ಹಲವು ಆರ್ಥಿಕ, ಕೌಟುಂಬಿಕ ಸಂಕಷ್ಟಗಳಿಗೆ, ಸಮಸ್ಯೆಗಳಿಗೀಡಾಗಿದ್ದರು. ಇತ್ತೀಚಿನ ವರ್ಷಗಳಲ್ಲಿ ಸರಕಾರ ಗಿರಿಜನ ಮಕ್ಕಳಿಗೆ ವಿದ್ಯಾಭ್ಯಾಸಕ್ಕಾಗಿ ಸಾಕಷ್ಟು ಗಮನ ನೀಡುತ್ತಿದೆ. ಆದರೆ ಸಾರಾಯಿ ಅಂಗಡಿಗಳು ಹತ್ತಿರದಲ್ಲೇ ಇರುವುದರಿಂದ ಶಾಲಾ ವಯಸ್ಸಿನ ಮಕ್ಕಳು ಕೂಡ ಈ ದುಶ್ಚಟಕ್ಕೆ ಬಲಿಯಾಗಬಹುದು, ಆಗುತ್ತಿದ್ದಾರೆ ಎನ್ನುವುದು ಇಲ್ಲಿಯ ಮಹಿಳೆಯರ ಆತಂಕ ಹಾಗೂ ದೂರಾಗಿತ್ತು.

ಇಂಥ ಪರಿಸ್ಥಿತಿಯಲ್ಲಿ ಈ ಪೋಡುಗಳಲ್ಲಿನ ಮಹಿಳಾ ಸಂಘಟನೆಗಳು 2001ರ ಆಗಸ್ಟ್ ತಿಂಗಳ ಮೊದಲ ವಾರದಲ್ಲಿ ಸಾರಾಯಿ ವಿರೋಧೀ ಹೋರಾಟವನ್ನು ಹಮ್ಮಿಕೊಳ್ಳಲು ನಿರ್ಧರಿಸಿದವು. ಇದರ ಸುಳಿವು ಹಿಡಿದ ಸಾರಾಯಿ ಗುತ್ತಿಗೆದಾರರು ಸಾರಾಯಿ ಮಾರಾಟದ ವಿರುದ್ಧದ ಚಳವಳಿಯನ್ನು ಯೋಜಿಸದಂತೆ ಈ ಸಂಘಟನೆಗಳಿಗೆ ಬೆದರಿಕೆ ಹಾಕಿದರಾದರೂ ಮಹಿಳೆಯರು ಅಂಥ ಬೆದರಿಕೆಗಳಿಗೆ ಕಿವಿಗೊಡದೆ ಆಗಸ್ಟ್ 10ರಂದು ಚಳವಳಿಯನ್ನು ಆರಂಭಿಸುವ ತೀರ್ಮಾನವನ್ನು ತೆಗೆದುಕೊಂಡರು. ಅಲ್ಲಿಯ ವಿವೇಕಾನಂದ ಗಿರಿಜನಕಲ್ಯಾಣ ಕೇಂದ್ರವು ಇದಕ್ಕೆ ಬೆಂಬಲವಾಗಿ ನಿಂತಿತು. ಈ ಕೇಂದ್ರದ ಸಂಯೋಜಕರಾದ ಮಲ್ಲೇಶ ಅವರು ಗಿರಿಜನರು ತಮ್ಮ ಆರ್ಥಿಕ ವ್ಯವಸ್ಥೆಯನ್ನು ಉತ್ತಮ ಪಡಿಸುವತ್ತ ಗಮನ ಹರಿಸಲು ಸಾರಾಯಿ ಮಾರಾಟ ನಿಷೇಧ ಅನಿವಾರ್ಯ ಎನ್ನುವ ಕಿವಿಮಾತನ್ನು ಸಂಘಟನೆಗಳಿಗ ತಿಳಿಸಿದರು. ಅವರೆಲ್ಲರೂ ಸೇರಿ ರಚಿಸದ ಸಾರಾಯಿ ಮಾರಾಟ ವಿರೋಧೀ ಹೋರಾಟ ಸಮಿತಿಗೆ ಮಾಜಿ ತಾಲ್ಲೂಕು ಪಂಚಾಯಿತಿ ಸದಸ್ಯೆ ಕೇತಮ್ಮ ಅಧ್ಯಕ್ಷೆಯಾಗಿ, ಮಾಜಿ ಪಂಚಾಯಿತಿ ಅಧ್ಯಕ್ಷೆಯಾದ ಬಸಮ್ಮ ಸಂಘಟನಾ

ಸಂಚಾಲಕರಾಗಿ ಆಯ್ಕೆಯಾದರು. ಸುಮಾರು 150 ಕ್ಕೂ ಹೆಚ್ಚು ಮಂದಿ ಮಹಿಳೆಯರು ಆಯ್ಕೆ ಮಾಡಿದ್ದರು.

ನಿಶ್ಚಿತವಾದ ದಿನಕ್ಕೆ ಒಂದು ದಿನ ಮುಂಚಿತವಾಗಿಯೇ ಅಂದರೆ ದಿನಾಂಕ 9ರಂದೇ ಬಿಳಿಗಿರಿರಂಗನ ಬೆಟ್ಟದ ಹೊಸಪೋಡು ವೃತ್ತದಲ್ಲಿ ಸಾವಿರಕ್ಕೂ ಹೆಚ್ಚು ಸಂಖ್ಯೆಯ ಮಹಿಳೆಯರು ಸಾರಾಯಿ ಮಾರಾಟ ನಿಷೇಧಕ್ಕೆ ಒತ್ತಾಯಿಸಿ ಧರಣಿ ಕುಳಿತರು. 'ವಿಷದ ಸಾರಾಯಿ ಮಾರಾಟ ಬೇಡ' ಎಂಬ ಘೋಷಣೆಯೊಂದಿಗೆ ಅಂದು ಬೆಳಗಿನ ಐದು ಗಂಟೆಗೇ ಧರಣಿ ಆರಂಭವಾಯಿತು. ಜಿಲ್ಲಾಧಿಕಾರಿಗಳು ಸ್ಥಳಕ್ಕೇ ಬಂದು ಸಾರಾಯಿ ಅಂಗಡಿಗಳನ್ನು ಮುಚ್ಚಿಸುವವರೆಗೆ ತಾವು ಆ ಸ್ಥಳದಿಂದ ಕದಲುವುದಿಲ್ಲವೆಂದು ಪಟ್ಟು ಹಿಡಿದರು. ಸಂಜೆ ಬಂದ ಮಳೆಗೂ ಬೆದರದ ಕಾಡಿನ ಮಕ್ಕಳು ತಹಶೀಲ್ದಾರರು ಬಂದು ಮನವೊಲಿಸಲು ಪ್ರಯತ್ನಿಸಿದಾಗ ಜಿಲ್ಲಾಧಿಕಾರಿಗಳೇ ಲಿಖಿತ ಭರವಸೆ ನೀಡಬೇಕೆಂದು ಹಟಹಿಡಿದರು.

ಪ್ರಗತಿಪರ ಮಹಿಳಾ ಸಂಘಟನೆ, ತಾಲ್ಲೂಕು ಸೋಲಿಗ ಅಭಿವೃದ್ಧಿ ಸಂಘ, ಸೋಲಿಗ ಅಭಿವೃದ್ಧಿ ಯುವಜನ ಜಾಗೃತಿ ವೇದಿಕೆ, ಜಿಲ್ಲಾ ಬುಡಕಟ್ಟು ಅಭಿವೃದ್ಧಿ ಸಂಘ ಹಾಗೂ ಮಹಿಳಾ ಸ್ವಸಹಾಯ ಸಂಘಗಳ ಒಕ್ಕೂಟಕ್ಕೆ ಸೇರಿದ್ದ ಸಾವಿರಕ್ಕೂ ಹೆಚ್ಚು ಮಂದಿ ಮಹಿಳೆಯರು ತಮ್ಮ ಮಕ್ಕಳೊಂದಿಗೆ ಧರಣಿಯಲ್ಲಿ ಪಾಲ್ಗೊಂಡಿದ್ದರು. ಹಾಡಿಗಳ ಬಹುತೇಕ ಮನೆ ಬಾಗಿಲುಗಳು ಮುಚ್ಚಿಕೊಂಡಿದ್ದವು; ಅಂಗಡಿ ಮುಂಗಟ್ಟುಗಳು ಬಂದಾಗಿದ್ದವು; ಬೆಟ್ಟ, ಚಾಮರಾಜನಗರ ಮತ್ತು ಯಳಂದೂರು ಕಡೆಗೆ ಹೋಗುವ ರಸ್ತೆಗಳು ಸೇರುವ ಗಂಗಾಧರೇಶ್ವರ ದೇವಸ್ಥಾನದ ವೃತ್ತದ ಬಳಿ ಚಳವಳಿಕಾರರು ಜಮಾಯಿಸಿದ್ದ ಕಾರಣ ವಾಹನ ಸಂಚಾರಗಳು ಸಂಪೂರ್ಣವಾಗಿ ಸ್ಥಗಿತಗೊಂಡಿದ್ದವು.

ಮಹಿಳಾ ಸ್ವಸಹಾಯ ಸಂಘಗಳ ಒಕ್ಕೂಟದ ಅಧ್ಯಕ್ಷೆ ಪುಷ್ಪ ಧರಣಿ ನಿರತರನ್ನುದ್ದೇಶಿಸಿ, "ಇತ್ತೀಚೆಗೆ ಕುಡಿತದ ಹಾವಳಿ ಹೆಚ್ಚಾಗಿದ್ದು ಗಂಡಸರ ಅಲ್ಪಸ್ವಲ್ಪ ಗಳಿಕೆಯೂ ಸಾರಾಯಿ ಅಂಗಡಿಗಳ ಪಾಲಾಗುತ್ತಿದೆ ; ಮಹಿಳೆಯರು, ಮಕ್ಕಳು ಉಪವಾಸದಿಂದ ಬೇಸತ್ತು ಆತ್ಮಹತ್ಯೆ ಮಾಡಿಕೊಳ್ಳುವ ಶೋಚನೀಯ ಸ್ಥಿತಿ ತಲೆದೋರಿದೆ" ಎಂದು ಕಳವಳ ವ್ಯಕ್ತಪಡಿಸಿದರಲ್ಲದೆ "ಜಿಲ್ಲಾಧಿಕಾರಿಗಳು ಸ್ಥಳಕ್ಕೆ ಆಗಮಿಸಿ ಸಾರಾಯಿ ಅಂಗಡಿಗಳನ್ನು ಎತ್ತಂಗಡಿ ಮಾಡಿಸದಿದ್ದರೆ ನಾವು ಕಾನೂನನ್ನು ಕೈಗೆತ್ತಿಕೊಂಡು ಸಾರಾಯಿ ಅಂಗಡಿಗಳನ್ನು ಧ್ವಂಸ ಮಾಡಬೇಕಾಗುತ್ತದೆ" ಎಂದು ಅಧಿಕಾರಿಗಳನ್ನು ಎಚ್ಚರಿಸಿದರು.

ಸಮಾಜ ಸೇವಾ ಕಾರ್ಯಕರ್ತೆಯಾದ ಜಲ್ಲೆಸಿದ್ದಮ್ಮ, 'ಕುಡಿತದ ಹಾವಳಿಯಿಂದಾಗಿ ಜನರ ಆರೋಗ್ಯ ಕೆಡುತ್ತಿದೆ; ಮಗುವಿನಿಂದ ತಾಯಿಯವರೆಗೂ ಈ ಕುಡಿತದ ಚಟ ಬೆಳೆದಿದೆ; ಇದರ ಪರಿಣಾಮವಾಗಿ 2-3 ಸಾವುಗಳು ಸಂಭವಿಸಿವೆ' ಎಂದು ಆತಂಕಪಟ್ಟರು.

ಪ್ರತಿಭಟನಾಕಾರರನ್ನುದ್ದೇಶಿಸಿ ಮಾತನಾಡಿದ ಡಾ. ಹೆಚ್. ಸುದರ್ಶನ್‌ರವರು, ವನ್ಯಧಾಮ, ಪವಿತ್ರ ಯಾತ್ರಾಸ್ಥಳ ಹಾಗೂ ಗಿರಿಜನರ ಹಾಡಿಗಳಲ್ಲಿ ಸಾರಾಯಿ ಮಾರಾಟವನ್ನು ನಿಷೇಧಿಸಬೇಕು ಎಂದು ಕೇಂದ್ರ ಸರಕಾರವು ಈ ಹಿಂದೆಯೇ ಆದೇಶ ನೀಡಿದ್ದರೂ ಅದು ಇಂದೂ ಜಾರಿಗೊಂಡಿಲ್ಲ. ಸರಕಾರಕ್ಕೆ ಇದರಿಂದ ಶೇ.18ರಷ್ಟು ಆದಾಯ ಬರುತ್ತದೆಯೇನೋ ಹೌದು. ಆದರೆ ಈ ಪಾಪದ ಹಣದಿಂದ ಸರಕಾರ ದೇಶದ ಉದ್ಧಾರ ಮಾಡುವುದು ಬೇಡ.... ಇದೀಗ ತಾನೆ ಅಭಿವೃದ್ಧಿಯ ಹಾದಿಯನ್ನು ತುಳಿದಿರುವ ಗಿರಿಜನರ ಬದುಕಿಗೆ ಸಾರಾಯಿ ಮತ್ತು ಮದ್ಯದಂಗಡಿಗಳು ಸಂಚಕಾರ ತಂದೊಡ್ಡುತ್ತಿವೆ.... ಆಲ್ಕೊಹಾಲ್ ಸೇವನೆಯಿಂದ ಗಿರಿಜನರ ಹಾಡಿಗಳಲ್ಲಿ ಅತ್ಯಾಚಾರ ಮತ್ತಿತರ ಅನಾಹುತಗಳು ಹೆಚ್ಚುತ್ತಿವೆ. ಜೊತೆಗೆ ಜನರ ಆರೋಗ್ಯವೂ ಹಾಳಾಗುತ್ತಿದೆ.... ಗಿರಿಜನರ ಹಾಡಿಗಳಲ್ಲಿ ಮದ್ಯದಂಗಡಿಗಳನ್ನು ಕಟ್ಟುನಿಟ್ಟಾಗಿ ತೆರವುಗೊಳಿಸಬೇಕು.... ಹೆಗ್ಗಡದೇವನ ಕೋಟೆಯಲ್ಲಿ ನಡೆದ ಮಿನಿ ಸಚಿವ ಸಂಪುಟದ ಸಭೆಯಲ್ಲಿ ಹಾಡಿಗಳಿಂದ ಅರ್ಧಕಿಲೋಮೀಟರ ದೂರದಲ್ಲಿ ಸಾರಾಯಿ ಅಂಗಡಿಗಳನ್ನು ನಡೆಸಬಹುದೆಂದು ತೆಗೆದುಕೊಂಡ ನಿರ್ಧಾರ ರದ್ದಾಗಬೇಕು. ಎಂದು ಆಗ್ರಹಪಡಿಸಿದರಲ್ಲದೆ 540 ಕಿಲೊಮೀಟರು ವ್ಯಾಪ್ತಿಯ ಪಶ್ಚಿಮ ಘಟ್ಟ ಅರಣ್ಯವ್ಯಾಪ್ತಿಗೆ ಒಳಪಡುವ ಈ ಬೆಟ್ಟದಲ್ಲಿ ಮದ್ಯ ಮಾರಾಟಕ್ಕೆ ಅವಕಾಶವನ್ನೇ ಕೊಡಬಾರದು ಎಂದು ಹೇಳಿದರು.

ಈ ಸಂದರ್ಭದಲ್ಲಿ ಬಸವಮ್ಮ, ರಂಗವಮ್ಮ, ರಾಜಮ್ಮ, ಬುಡಕಟ್ಟು ಕ್ರಿಯಾ ಸಮಿತಿಯ ಸಂಚಾಲಕರಾಗಿದ್ದ ಮಲ್ಲೇಶಪ್ಪ, ಗಂಗೇಗೌಡ ಮುಂತಾದವರಲ್ಲದೆ ಹನ್ನೊಂದು ಪೋಡಿಗಳ ಮುಖಂಡರು ಮಾತನಾಡಿ ಮದ್ಯ ಮಾರಾಟದ ವಿರುದ್ಧ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದರು.

ಇಷ್ಟೆಲ್ಲಾ ನಡೆದರೂ ಜಿಲ್ಲಾಡಳಿತ ಮಾತ್ರ ಅಂದು ರಾತ್ರಿಯಾದರೂ ಕಿವಿಮುಚ್ಚಿಕೊಂಡೇ ಕುಳಿತಿತ್ತು. ಇದರಿಂದ ಮಹಿಳೆಯರು ಕುಪಿತರಾದರು ; ಪಟ್ಟುಬಿಡದೆ ತಮ್ಮ ಧರಣಿಯನ್ನು. ಮುಂದುವರಿಸಿದರು. ಈ ಹಿನ್ನೆಲೆಯಲ್ಲಿ ಪರಿಸ್ಥಿತಿ ಗಂಭೀರವಾಗುತ್ತಿರುವುದನ್ನು ಮನಗಂಡ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರಾದ ಮಹಮ್ಮದ್‌ಗೌಸ್ ಮತ್ತು ಅಬಕಾರಿ ಉಪ ಆಯುಕ್ತ ಮುನಿನಾರಾಯಣಪ್ಪನವರು ಸ್ಥಳಕ್ಕೆ ಭೇಟಿ ನೀಡಿದರು ; ಗಿರಿಜನ ಮಹಿಳೆಯರಿಗೆ ಸಾರಾಯಿ ಮಾರಾಟವನ್ನು ನಿಷೇಧಿಸುವ ಭರವಸೆ ನೀಡಿದರು. ಸಾರಾಯಿ ಮಾರಾಟದ ಲೈಸೆನ್ಸನ್ನು ಹೊಂದಿದ್ದ ವ್ಯಕ್ತಿಯೊಬ್ಬನ ಲೈಸೆನ್ಸ್ ಪ್ರತಿಯನ್ನು ವಾಪಸು ಪಡೆದು ಸುಟ್ಟುಹಾಕಿದರು.

ಬಿಳಿಗಿರಿರಂಗನ ಮೇಲೆ ಆಣೆ ಇಟ್ಟು ಇನ್ನು ಮುಂದೆ ತಾವು ಯಾರಿಗೂ ಲೈಸೆನ್ಸ್ ನೀಡುವುದಿಲ್ಲವೆಂದು ಹೇಳಿದರು. ಸಾರಾಯಿಮಾರಾಟಗಾರನೊಬ್ಬ ತಾನು ಇನ್ನು ಮುಂದೆ ಸಾರಾಯಿ ದಂಧೆಯನ್ನು ಬಿಟ್ಟುಬಿಡುವುದಾಗಿ ತಿಳಿಸಿದ. ಅಧಿಕಾರಿಗಳು ತಾವು ಸಾರಾಯಿ ಮಾರಾಟವನ್ನು ತಡೆಹಿಡಿಯುವ ಭರವಸೆ ನೀಡಿದರು.

ಎಲ್ಲವನ್ನೂ ಕೇಳಿಸಿಕೊಂಡ ಮಹಿಳೆಯರ ಪರವಾಗಿ ಗಿರಿಜನ ಮಹಿಳೆಯರ ಸ್ವಸಹಾಯ ಸಂಘದ ಅಧ್ಯಕ್ಷೆ ಪುಷ್ಪ ಮಾತನಾಡಿ, ಸಾರಾಯಿ ಅಂಗಡಿ ರದ್ದತಿಗೆ ಹೋರಾಟ ನಡೆಸಿದರೆ ಅತ್ಯಾಚಾರ ಮಾಡುವ ಬೆದರಿಕೆಯನ್ನು ಸಾರಾಯಿಗುತ್ತಿಗೆದಾರರು ಹಾಕಿದ್ದಾರೆ. ಈ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರೂ ಅವರನ್ನು ನಿರ್ಲಕ್ಷಿಸಿದ್ದಾರೆ. ಪ್ರತಿದಿನ ಗಂಡಸರ ಕುಡಿತವನ್ನು ತಾಳಲಾರದೆ ಪ್ರತಿಭಟನೆಗಿಳಿದಿದ್ದೇವೆ.... ಮಧ್ಯರಾತ್ರಿಯಲ್ಲಿ ದೇಶಕ್ಕೆ ಸ್ವಾತಂತ್ರ್ಯ ದೊರೆತಂತೆ ಇಂದೂ ಸಹ ನಮ್ಮ ಬೇಡಿಕೆಯಂತೆ ಮಧ್ಯರಾತ್ರಿಯಲ್ಲಿ ನಮಗೆ ಸಾರಾಯಿಯಿಂದ ಮುಕ್ತಿ ದೊರಕಿದೆ.... ಮತ್ತೇನಾದರೂ ಲೈಸೆನ್ಸ್ ನೀಡಿದರೆ ಅಂಗಡಿಯನ್ನೇ ಧ್ವಂಸ ಮಾಡುತ್ತೇವೆ ಎಂದು ಎಚ್ಚರಿಕೆ ನೀಡಿದರು.

ಅಧಿಕಾರಿಗಳು ಸಾರಾಯಿ ಅಂಗಡಿ ಲೈಸೆನ್ಸ್‌ಗಳನ್ನು ರದ್ದು ಪಡಿಸುವ ತೀರ್ಮಾನವನ್ನು ಪ್ರಕಟಿಸುತ್ತಿದ್ದಂತೆಯೇ ಮಹಿಳೆಯರು ಹರ್ಷೋದ್ಗಾರ ಮಾಡಿದರು. ಅನಂತರ ಸಂಘಗಳ ಪದಾಧಿಕಾರಿಗಳು ಸಭೆ ಸೇರಿ, ಇನ್ನು ಮುಂದೆ ಹಾಡಿಗಳಿಗೆ ಸಾರಾಯಿ ಕುಡಿದು ಬಂದು ಗಲಾಟೆ ಮಾಡಿದರೆ ಅವರಿಗೆ 1001 ರೂಪಾಯಿಗಳ ದಂಡ ವಿಧಿಸಬೇಕು ; ಅವರನ್ನು ಬೆತ್ತಲೆಗೊಳಿಸಿ ಮರಕ್ಕೆ ಕಟ್ಟಿ ಹಾಕಬೇಕು; ಚರಂಡಿ ನೀರಿನ ಸ್ನಾನ ಮಾಡಿಸಿ ಗ್ರಾಮದಿಂದ ಬಹಿಷ್ಕಾರ ಹಾಕಬೇಕು ಎನ್ನುವ ನಿರ್ಧಾರವನ್ನು ಕೈಗೊಂಡರು.

ಈ ಯಶಸ್ವೀ ಹೋರಾಟದ ಫಲಶ್ರುತಿಯೆಂಬಂತೆ ಇದೇ ತಾಲ್ಲೂಕಿನ ಹರದನಹಳ್ಳಿ ಗ್ರಾಮಪಂಚಾಯಿತಿಯ ವ್ಯಾಪ್ತಿಯಲ್ಲಿ ಬರುವ ಮದ್ಯ ಮತ್ತು ಸಾರಾಯಿ ಅಂಗಡಿಗಳನ್ನು ತೆರವುಗೊಳಿಸುವ ನಿರ್ಣಯವನ್ನು ಅಲ್ಲಿನ ಗ್ರಾಮಪಂಚಾಯಿತಿ ಸಭೆಯಲ್ಲಿ ತೆಗೆದುಕೊಳ್ಳಲಾಯಿತು.

ಇದೇ ತಿಂಗಳ ಅವಧಿಯಲ್ಲಿ ಸಾರಾಯಿ ವಿರೋಧಿ ಹೋರಾಟದ ಕಿಚ್ಚು ಮಹಿಳೆಯರಲ್ಲಿ ಉಂಟಾಗಿದ್ದುದು ಮೈಸೂರು ಮತ್ತು ಚಿತ್ರದುರ್ಗ ಜಿಲ್ಲೆಗಳ ಹಲವೆಡೆ ಕಂಡುಬರುತ್ತದೆ. ಮೈಸೂರು ತಾಲ್ಲೂಕಿನ ಜಯಪುರ ಹೋಬಳಿಯ ಮುರುಡಗಳ್ಳಿ, ಚೋರನಹಳ್ಳಿ ಕೃಷ್ಣರಾಜ ನಗರ ತಾಲ್ಲೂಕಿನ ಕುಪ್ಪೆ, ಭೇರ್ಯ. ಟೀ.ನರಸೀಪುರ ತಾಲ್ಲೂಕಿನ ತುಂಬಲಗ್ರಾಮ, ಹೆಗ್ಗಡ ದೇವನ ಕೋಟೆ ತಾಲ್ಲೂಕಿನ ಅಂತರಸಂತೆ ಹೋಬಳಿಯ ಹೊಸಹೊಳಲು ಗ್ರಾಮಗಳಲ್ಲಿ ಮಹಿಳೆಯರ ಸಾರಾಯಿವಿರೋಧಿ ದನಿಗಳು ಕೇಳಿಬಂದವು.

ಕೃಷ್ಣರಾಜನಗರ ತಾಲ್ಲೂಕಿನ ಭೇರ್ಯ ಗ್ರಾಮದಲ್ಲಿ ಸ್ತ್ರೀಶಕ್ತಿ ಮಹಿಳಾ ಸಂಘ, ಕಾಳಮ್ಮ ಸ್ವಸಹಾಯ ಸಂಘ, ಆದಿಶಕ್ತಿ ಮಹಿಳಾ ಸಂಘ, ಕರಿಯಮ್ಮ ಮಹಿಳಾಸಂಘ, ದೊಡ್ಡಮ್ಮ ಮಹಿಳಾ ಸಂಘ, ಚಿಕ್ಕಮ್ಮ ಮಹಿಳಾ ಸಂಘ, ಸ್ತ್ರೀಶಕ್ತಿ ಮಸಳಕಮ್ಮ ಮಹಿಳಾ ಸಂಘದ ನೂರೈವತ್ತಕ್ಕೂ ಹೆಚ್ಚು ಮಂದಿ ಮಹಿಳೆಯರು ಮೆರವಣಿಗೆಯಲ್ಲಿ ತಾಲ್ಲೂಕು ಎತ್ತಂಗಡಿ ಮಾಡುವಂತೆ ತಹಶೀಲ್ದಾರರಿಗೆ ಮನವಿಪತ್ರ ಸಲ್ಲಿಸಿದರು. ಇದೇ ತಾಲ್ಲೂಕಿನ ಕುಪ್ಪೆ ಗ್ರಾಮದ ಸ್ತ್ರೀಶಕ್ತಿ ಮಹಿಳಾ ಸಂಘದ ಅಧ್ಯಕ್ಷೆಯಾದ ಲತಾ ಮೋಹನ ಮತ್ತು ಸದಸ್ಯೆಯರಾದ ಜಯಲಕ್ಷ್ಮಿ ರೇಖಾ, ಮಂಜುಳಾ ಮತ್ತು ಮೀನಾ, ತಮ್ಮ ಊರಿನ ಶಾಲೆಗೆ ಹತ್ತೇ ಅಡಿ ಅಂತರದಲ್ಲಿರುವ ಸಾರಾಯಿ ಅಂಗಡಿಯನ್ನು ತೆರವು ಮಾಡಿಸಬೇಕೆಂದು ಅಧಿಕಾರಿಗಳನ್ನು ಒತ್ತಾಯಿಸಿದ್ದರು.

ಹೆಗ್ಗಡದೇವನ ಕೋಟೆಯ ಅಂತರಸಂತೆ ಹೋಬಳಿಯ ಹೊಸಹೊಳಲು ಗ್ರಾಮದ ಆದರ್ಶ ಮಹಿಳಾ ಸಂಘದ ಅಧ್ಯಕ್ಷೆ ರತ್ನಮ್ಮ, ಸೀತಾ ಮಹಿಳಾ ಸಂಘದ ಕಾಳಮ್ಮ, ತುಳಸಿ ಮಹಿಳಾ ಸಂಘದ ಗೌರಮ್ಮ, ಸರಸ್ವತಿ ಮಹಿಳಾ ಸಂಘದ ಸೌಭಾಗ್ಯ, ಇಂದಿರಾ ಮಹಿಳಾ ಸಂಘದ ಶಿವಮ್ಮ, ಸಂಚಿಗ ಮಹಿಳಾ ಸಂಘದ ನಾಗಮ್ಮ, ಸ್ವಶಕ್ತಿ ಮಹಿಳಾ ಸಂಘದ ಜಯಮ್ಮ, ಶ್ರೀ ಶಕ್ತಿ ಮಹಿಳಾ ಸಂಘದ ರತ್ನಮ್ಮ, ಲಕ್ಷ್ಮೀದೇವಿ ಸ್ವಸಹಾಯ ಸಂಘದ ಗೌರಮ್ಮ ಮತ್ತು ಮಹಿಳಾ ಸವಿತಾ ಸಂಘದ ಪುಟ್ಟಮ್ಮನವರೊಂದಿಗೆ ಇತರ ಮುಖಂಡರು ಅಲ್ಲಿನ ತಹಶೀಲ್ದಾರರನ್ನೂ ಭೇಟಿ ಮಾಡಿ ತಮ್ಮ ಗ್ರಾಮದ ಶಾಲೆಯ ಬಳಿಯೇ ಇರುವ ಸಾರಾಯಿ ಅಂಗಡಿಯನ್ನು ಮುಚ್ಚುವಂತೆ ಅವರಿಗೆ ಲಿಖಿತ ಮನವಿಯೊಂದನ್ನು ಸಲ್ಲಿಸಿದರು.

ಮೈಸೂರು ತಾಲ್ಲೂಕಿನ ವರುಣಾ ಹೋಬಳಿಯ ಚೋರನಹಳ್ಳಿಯ ಮಹಿಳೆಯರು ಗ್ರಾಮದ ಸಶಕ್ತಿ ಮಹಿಳಾ ಸಂಘಟನೆಯ ನೇತೃತ್ವದಲ್ಲಿ ಸಾರಾಯಿ ಅಂಗಡಿಗಳನ್ನು ಆಗಸ್ಟ್ 15 ರ ಸ್ವಾತಂತ್ರ್ಯ ದಿನಾಚರಣೆಯ ಸಂದರ್ಭದಲ್ಲಿ ಕಪ್ಪು ಬಾವುಟ ಹಿಡಿದು ಚಳವಳಿಯನ್ನು ನಡೆಸುವುದಾಗಿ ಜಿಲ್ಲಾಧಿಕಾರಿಗಳಿಗೆ ಬೆದರಿಕೆ ಹಾಕಿತು. ಇಲ್ಲಿಯ ಅಂಬೇಡ್ಕರ್ ಯುವಕ ಸಂಘವೂ ಇವರಿಗೆ ಬೆಂಬಲ ನೀಡಿತು.

## ಚಿತ್ರದುರ್ಗ

ಚಿತ್ರದುರ್ಗ ಜಿಲ್ಲೆಯಲ್ಲಿ ಇತ್ತೀಚಿನ ವರ್ಷಗಳಲ್ಲಿ ಮಹಿಳಾ ಸ್ವಸಹಾಯ ಸಂಘಗಳು, ದಲಿತ ಸಂಘಟನೆಗಳು ಮತ್ತು ಏಕಲವ್ಯ ಸಂಘಟನೆಗಳು ಬಲಗೊಳ್ಳುತ್ತಿವೆ. ಜಿಲ್ಲೆಯ ಪ್ರತಿ ಹಳ್ಳಿಯಲ್ಲೂ ವಿವಿಧ ಸ್ವಸಹಾಯ ಸಂಘಗಳು ರಚನೆಯಾಗಿದ್ದು ಅವುಗಳ ಸಂಖ್ಯೆ ಸಾವಿರ ದಾಟಿದೆ. ಈ ಸಂಘಗಳು ಮಹಿಳೆಯರಿಗೆ ತಮ್ಮ

ಹಕ್ಕುಗಳನ್ನರಿಯಲು ಅವುಗಳಿಗಾಗಿ ಹೋರಾಡುವುದನ್ನು ಕಲಿಸಿಕೊಟ್ಟವೆ. 2001 ರಲ್ಲಿ ಮಹಿಳೆಯರ ಸಶಕ್ತೀಕರಣ -ಕ್ಕಾಗಿಯೇ ಹುಟ್ಟಿಕೊಂಡಿದ್ದ ಸಂಘಗಳು ಸಾರಾಯಿ ವಿರೋಧೀ ಹೋರಾಟವನ್ನು ಆರಂಭಿಸಿದವು. ಮದ್ಯಪಾನದ ದುಷ್ಪರಿಣಾಮಗಳನ್ನು ಮನಗಂಡಿದ್ದ 600ಕ್ಕೂ ಹೆಚ್ಚು ಸಂಘಗಳ ಮಹಿಳೆಯರು ಅಕ್ರಮ ಸಾರಾಯಿ ಮಾರಾಟದ ನಿಷೇಧಕ್ಕಾಗಿ ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಅಬಕಾರಿ ಆಯುಕ್ತರಿಗೆ ಒತ್ತಾಯ ಪೂರ್ವಕವಾದ ಮನವಿಯನ್ನು ಸಲ್ಲಿಸಿದರು.

ಒಟ್ಟಿನಲ್ಲಿ ಹೇಳಬೇಕೆಂದರೆ, 2001 ನೇ ವರ್ಷದಲ್ಲಿ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಹಿಂದೆಂದೂ ಕಂಡರಿಯದಷ್ಟು ಸಾರಾಯಿ ವಿರೋಧಿ ಚಳವಳಿಗಳು ಮಹಿಳೆಯರಿಂದ ನಡೆದವೆನ್ನಬಹುದು. ಹಾಗೆಯೇ ಮೇಲೆ ತಿಳಿಸಿದ ಚಳವಳಿಗಳನ್ನು ಗಮನಿಸಿದಾಗ ಬೇರೆಡೆ ನಡೆದ ಸಾರಾಯಿ ವಿರೋಧಿ ಚಳವಳಿಗಳೊಂದಿಗೆ ಕೆಲವು ಅಂಶಗಳಲ್ಲಿ ಸಾಮ್ಯವನ್ನು ಹೊಂದಿರುವುದನ್ನು ಕಾಣಬಹುದು :

- ❖ ಇವುಗಳಲ್ಲಿ ಭಾಗವಹಿಸಿದ ಮಹಿಳೆಯರು ಗ್ರಾಮೀಣ ಪ್ರದೇಶದವರು, ಪರಿಶಿಷ್ಟ, ಜಾತಿ/ಪಂಗಡಗಳಿಗೆ ಸೇರಿದವರು, ಹಿಂದುಳಿದ ಜಾತಿ/ಪಂಗಡಗಳಿಗೆ ಸೇರಿದವರು, ಹಿಂದುಳಿದ ಜಾತಿ/ವರ್ಗಗಳಿಗೆ ಸೇರಿದವರಾಗಿದ್ದರು.
- ❖ ಇವರಲ್ಲಿ ಹೆಚ್ಚಿನವರು ಅನಕ್ಷರಸ್ಥರಾಗಿದ್ದರು.
- ❖ ಪ್ರಜಾ ಪ್ರಭುತ್ವದ ತಾತ್ವಿಕ ಹಿನ್ನೆಲೆಯಲ್ಲಿ ತಮ್ಮ ಕೌಟುಂಬಿಕ ಮತ್ತು ಸಾಮಾಜಿಕ ನೆಮ್ಮದಿಗಾಗಿ ನಡೆಸಿದ ಹೋರಾಟವಾಗಿದ್ದವು.
- ❖ ಅಸಂಘಟಿತ ವರ್ಗದ ಮಹಿಳೆಯರು ಸಂಘಟಿತರಾಗಿ ನ್ಯಾಯಕ್ಕಾಗಿ ಹೋರಾಡುವುದನ್ನು ಕಲಿತು, ಕಲಿಸುವ ಒಂದು ಪ್ರಕ್ರಿಯೆಯಾಗಿತ್ತು.
- ❖ ತಮ್ಮ ಮೇಲಾಗುತ್ತಿರುವ ಹಿಂಸೆಯ ವಿರುದ್ಧ ನಡೆಸಿದ ಅಹಿಂಸಾತ್ಮಕವಾದ ಹಾಗೂ ಶಕ್ತಿಯುತವಾದ ಚಳವಳಿಗಳಾಗಿದ್ದವು.
- ❖ ಯಾವುದೇ ಪಕ್ಷ ರಾಜಕೀಯದಿಂದ ಹೊರತಾಗಿ ನಡೆದ ತಮ್ಮದೇ ಆದ ಸೈದ್ಧಾಂತಿಕ ನಿಲುವು, ಸ್ಪಷ್ಟಗುರಿಗಳನ್ನು ಹೊಂದಿದ್ದ ಹೋರಾಟ -ಗಳಾಗಿದ್ದವು.
- ❖ ಸರಕಾರಗಳ ಲಾಭಬುರುಕತನ ಬೇಜವಾಬ್ದಾರಿತನ ಭ್ರಷ್ಟರಾಜಕೀಯ, ಬೌದ್ಧಿಕ ಮತ್ತು ನೈತಿಕ ದಿವಾಳಿ ತನಕ್ಕೆ ಹಿಡಿದ ಕನ್ನಡಿಗಳಾಗಿದ್ದವು.

ಏನೇ ಆದರೂ ಈ ಚಳವಳಿಗಳಿಂದಾದ ಪ್ರತಿಫಲ ಬಹುಕಾಲದವರೆಗೆ ಉಳಿಯುವಂಥದಾಗಿರಲಿಲ್ಲ. ಕಾರಣ ಹೋರಾಟಕ್ಕೆ ಅಗತ್ಯವಾದ ಆರ್ಥಿಕ ಭದ್ರತೆ, ಬೆಂಬಲ ಗುಂಪುಗಳ ಕೊರತೆ, ಸಮಾಜದಲ್ಲಿ ಶತಮಾನಗಳಿಂದ ಆಳವಾಗಿ ಬೇರುಬಿಟ್ಟಿರುವ ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆ ಮುಂತಾದುವು. ಅಲ್ಲದೆ ಈ ಹೋರಾಟಗಳು ಕುಡಿತದ ಚಟಕ್ಕೆ ಒಳಗಾಗಿ ಕೌಟುಂಬಿಕ ನೆಮ್ಮದಿ, ಶಾಂತಿಯನ್ನು ಕದಡುವ ಪುರುಷರು, ನೈತಿಕ ದಿವಾಳಿತನದಿಂದ, ಹಾಗೂ ಲಾಭ ಬಡುಕತನ ದಿಂದ ಸಾರಾಯಿ ಮಾರಾಟದಂಥ ವೃತ್ತಿಯನ್ನು ಹಣ ಮಾಡಲು ಸುಲಭ ಮಾರ್ಗವೆಂದು ನಂಬಿರುವ ಪುರುಷರು, ಅಧಿಕಾರವನ್ನು ಹಿಡಿದು ಭ್ರಷ್ಟಾಚಾರವನ್ನು ಮೈಗೂಡಿಸಿಕೊಂಡು ಜನಪರ ಕಾರ್ಯ ಮಾಡದೆ ರಾಜಕಾರಣಿಗಳ ಕೈಗೊಂಬೆಗಳಾಗಿರುವ ಅಧಿಕಾರಿ ವರ್ಗದ ಪುರುಷರು, ಸ್ವಾತಂತ್ರ್ಯ ಬಂದಾಗಿನಿಂದಲೂ ರಾಜಕೀಯ ಮಾಡುತ್ತಾ ಸರಕಾರವನ್ನು ಸಾರಾಯಿ ಮಾರಾಟದಿಂದಲೇ ನಡೆಸುವುದು ಅನಿವಾರ್ಯವೆಂದು ನಂಬಿ ಜನದ್ರೋಹಿ ರಾಜಕಾರಣಿಗಳಾದ ಪುರುಷರ ವಿರುದ್ಧವಾಗಿತ್ತೆನ್ನುವುದನ್ನು ನಾವು ಮರೆಯುವಂತಿಲ್ಲ. ಆದರಿಂದಲೇ ಈ ಹೋರಾಟಗಳು ಹೇಗೆ ಹುಟ್ಟಿಕೊಂಡವೋ ಹಾಗೇ ಹೇಳ ಹೆಸರಿಲ್ಲದಂತಾಗಿಬಿಡುವುದು ಕೂಡ ಪುರುಷರ ವ್ಯವಸ್ಥೆಯಲ್ಲಿ ಅನಿವಾರ್ಯ ಎನ್ನುವುದು ಇದರಿಂದ ಸಾಬೀತಾಗುತ್ತದೆ. ಏನೇ ಆದರೂ ಇಂಥ ಚಳವಳಿಗಳು ಆಡಳಿತಯಂತ್ರದ ಜಾಣಕಿವುಡುತನಕ್ಕೆ ಭ್ರಷ್ಟ ಸರಕಾರಕ್ಕೆ ಮಹಿಳೆಯರು ಕೊಟ್ಟ ದೊಡ್ಡ ಪೆಟ್ಟಾಗಿತ್ತೆನ್ನುವುದರಲ್ಲಿ ಸಂಶಯವಿಲ್ಲ ; ಆದರದು ತಾತ್ಕಾಲಿಕವಾಗಿದ್ದು ಆಡಳಿತ ಯಂತ್ರವು ಮತ್ತೆ ಯಥಾಸ್ಥಿತಿಗೆ ಕೆಲವೇ ದಿನಗಳಲ್ಲಿ ಮರಳಿತ್ತೆನ್ನುವುದನ್ನೂ ನಾವು ಮರೆಯುವಂತಿಲ್ಲ.

ಆಧಾರ / ಉಲ್ಲೇಖಗಳು

1) ಪತ್ರಿಕಾ ವರದಿಗಳು : 2001

2) ಮಾನಸ ಪತ್ರಿಕೆ

- ವೆಂ.ವನಜ

ಮೈಸೂರು

# ಕಾಲವನ್ನು ಹಿಂದಿಕ್ಕಿದವರು

ಸಾಂಪ್ರದಾಯಕ ಜ್ಞಾನದ ಎಳೆ, ಪ್ರತಿನಿತ್ಯದ ಸಂಭ್ರಮ ಹಿರಿಯರಿಂದ ಕಿರಿಯರವರೆಗೂ ಎಲ್ಲರ ಶಿಕ್ಷಣ. ಇವೆಲ್ಲದರ ಪ್ರತಿಬಿಂಬದಂತೆ ಕಾಣುವ ವ್ಯಕ್ತಿ ಸರಸ್ವತಿ. ನೀವು ಹೀಗೆಂದ ಕೂಡಲೆ ಇವರು ಶಿಕ್ಷಣ ಇಲಾಖೆಯ ಉನ್ನತ ಸ್ಥಾನದಲ್ಲಿರುವರು ಎಂದು ಭಾವಿಸಬಹುದು. ಆದರೆ ಸರಸ್ವತಿ ಚೆನ್ನೈನ ಹೃದಯ ಭಾಗದಲ್ಲಿರುವ ಟಿ.ನಗರದಲ್ಲಿ ತನ್ನ ವೃದ್ಧ ತಾಯಿಯೊಂದಿಗೆ ವಾಸಿಸುತ್ತಿರುವ ಮಹಿಳೆ. ಹೀಗೆಂದು ನೀವು ನಿರಾಶರಾಗ ಬೇಕಿಲ್ಲ. ಅವರ ಮಿನುಗುವ ಕಣ್ಣುಗಳು ನಿಮಗೆ ಮಹತ್ವಾಕಾಂಕ್ಷಿ ಒಂದರ ಪರಿಚಯ ಮಾಡುತ್ತದೆ.

ಚೆನ್ನೈನ ಟ್ರಿಪ್ಲಿಕೇನ್‌ನ ಒಟ್ಟು ಕುಟುಂಬವೊಂದರಲ್ಲಿ 15 ಮಕ್ಕಳು ಮತ್ತು 20ರಿಂದ 30ರವರೆಗಿನ ಹಿರಿಯರೊಂದಿಗೆ ಬಾಲ್ಯವನ್ನು ಕಳೆದ ಸರಸ್ವತಿ ಎಳೆತನದಲ್ಲಿ ತನ್ನ ಸೌಮ್ಯಗುಣಕ್ಕೆ ಹೆಸರಾದುದ್ದನ್ನು ನೆನಪಿಸಿಕೊಳ್ಳುತ್ತಾರೆ. ಅವರ 11ನೇ ವಯಸ್ಸಿನಲ್ಲಿ ಕುಟುಂಬದ ಸದಸ್ಯರೊಂದಿಗೆ ಅಜ್ಜಿಯ ಅಂತ್ಯ ಸಂಸ್ಕರಕ್ಕಾಗಿ ರುಧ್ರಭೂಮಿಗೆ ಹೋದಾಗ ನಡೆದ ಘಟನೆ ಇದು. ಸರಸ್ವತಿ ತನ್ನ ಸಂಬಂಧಿಯೊಬ್ಬರಿಗೆ ನೀರು ತುಂಬಲು ನೆರವಾಗುತ್ತಿದ್ದರು. ಆಗ ದೊಡ್ಡ ಮೊಳೆಯೊಂದನ್ನು ತುಳಿದು ಗಾಯ ಮಾಡಿಕೊಂಡರು. ನಂತರ ಸಹಜವಾಗಿ ತನ್ನ ತಾಯಿಯ ಬಳಿ ಹೋದರು. ಅವರ ತಾಯಿ ಗಾಯದ ಪ್ರಮಾಣ ನೋಡಿ ಗಾಭರಿಯಾದರು. ತನ್ನ ವೈಧ್ಯಪತಿಗೆ ಸೌಮ್ಯವಾಗಿ ನೋವನ್ನು ಸಹಿಸುತ್ತಿರುವ ಅವಳ ಮಾನಸಿಕ ಗುಣಮಟ್ಟ ಸರಿಯಾಗಿದೆಯೇ ಎಂದು ಪರಿಶೀಲಿಸಲು ಕೇಳಿದ್ದರು. ಬೇರೆಯಾರಾದರು ಇಂತಹ ಗಾಯಕ್ಕೆ ರಂಪಾಟ ಮಾಡಿ ದೊಡ್ಡ ಪ್ರಮಾಣದ ದೃಶ್ಯವನ್ನೇ ಸೃಷ್ಟಿಸಿಬಿಡುತ್ತಿದ್ದರೇನೊ. ಹೀಗೆ ಬಾಲ್ಯದಲ್ಲೇ ಅಪಾರ ಸಂಯಮ ತೋರಿದ ಸರಸ್ವತಿ ಜೀವನದಲ್ಲಿ ಐಹಿಕ ಬೇಡಿಕೆಗಳ ಬೆನ್ನು ಹತ್ತದವರು ಎಂದು ಯಾರಾದರೂ ಊಹಿಸಬಹುದು. ಅವರ ಬೇಡಿಕೆ,ಆಸೆ, ಆಕಾಂಕ್ಷೆಗಳೆಲ್ಲ ಶಿಕ್ಷಣದ ಕುರಿತೇ ಇತ್ತು. ಅವಿವಾಹಿತೆಯಾಗಿ ಉಳಿಯಲು ಪ್ರೇರಣೆ ನೀಡಿದ ಅಂಶಗಳಲ್ಲಿ ಶಿಕ್ಷಣವೇ ಪ್ರಧಾನವಾದದ್ದೇನೋ

ಸರಸ್ವತಿಯವರ ಕುಟುಂಬದಲ್ಲಿ ಸಾಮಾನ್ಯವಾಗಿ ಆಗಿನ ಕಾಲದಲ್ಲಿ ಹುಡುಗಿಯರು ಉನ್ನತ ಶಿಕ್ಷಣ ಪಡೆಯುತ್ತಿರಲಿಲ್ಲ. ಅವರ ಹಿರಿಯಕ್ಕ ಉನ್ನತ ಶಿಕ್ಷಣ ಪಡೆದಿರಲಿಲ್ಲ. ಅವರ ದೂರದ ಸಂಬಂಧಿಯೊಬ್ಬರು ಕಾಲೇಜ್ ಹಂತ ತಲುಪಿದ್ದವರು. ಸರಸ್ವತಿ ಯವರ ತಂದೆಯವರೊಬ್ಬರೇ ಅವರ ಆಸೆಗೆ ನೀರೆರೆದವರು, ಸರಸ್ವತಿ ಕೊನೆಗೂ ಕ್ವೀನ್ಸ್ ಮೇರಿ ಕಾಲೇಜನ್ನು ಸೇರಿದ್ದು ಸಂಬಂಧಿಕರೆಲ್ಲ ತಮ್ಮ ಅಭಿಪ್ರಾಯವನ್ನು ಬದಲಾಯಿ-ಸಿದ್ದರಿಂದಲ್ಲ, ಅವರ ಜಾತಕದ ಪ್ರಕಾರ ಇನ್ನು ನಾಲ್ಕು ವರ್ಷ ವಿವಾಹ ಯೋಗವಿಲ್ಲವೆಂಬುದು ಗೋಚರಿಸಿದ್ದರಿಂದ! ತಮ್ಮ ಇಂಟರ್ ಮೀಡಿಯಟ್ ನಂತರ ಅತಿ ಹೆಚ್ಚು ಅಂಕಗಳಿಸಿದ್ದ ಸರಸ್ವತಿಯವರಿಗೆ ಸಹಜವಾಗೇ ಮೆಡಿಕಲ್ ಪ್ರವೇಶ ದೊರಕಿತು. ಆದರೆ ತಮ್ಮ ತಂದೆಯ ಇಚ್ಛೆಯಂತೆಯೇ ಅವರು ಬಿ.ಎಸ್.ಸಿ ಯನ್ನೇ ಗೃಹ ವಿಜ್ಞಾನದ ವಿಶೇಷ ಆಯ್ಕೆಯೊಂದಿಗೆ ತಮ್ಮ ಅಧ್ಯಯನಕ್ಕೆ ಒಪ್ಪಿಕೊಂಡರು. ಗೃಹವಿಜ್ಞಾನದ ಬ್ಯಾಕ್ಟೀರಿಯಾಲಜಿ, ನ್ಯೂಟ್ರಿಷನ್, ಅಪ್ಲೈಡ್, ಕೆಮಿಸ್ಟ್ರಿ ಮುಂತಾದ ವಿಷಯಗಳು ಅವರಿಗೆ ಅಪ್ಯಾಯಮಾನವಾದವು. ಆದರೆ ಸರಸ್ವತಿ ಮತ್ತೆ ವಿವಾಹದ ಪ್ರಸ್ತಾಪ ಬಂದಾಗ ರಾಜಿಗೆ ಸಿದ್ಧರಾಗಲಿಲ್ಲ. ಹುಡುಗನ ಮನೆಯವರು 'ನೋಡುತ್ತಾರೆ' ಎಂದು ಸಹಜವಾಗಿ ತಾಯಿ ಹೇಳಿದಾಗ ಸರಸ್ವತಿ ಮನೆಯನ್ನೇ ಬಿಟ್ಟು ಹೋಗುವ ಬೆದರಿಕೆ ಒಡ್ಡಿದ್ದು ಮಾತ್ರವಲ್ಲ ಅಲ್ಪ ಕಾಲಕ್ಕೆ ಅದನ್ನು ಜಾರಿಗೆ ತಂದರು. ಅವರ ದೃಡ ನಿಶ್ಚಯ ಅರಿತ ಹೆತ್ತವರು ವಿವಾಹ ಪ್ರಸ್ತಾಪವನ್ನು ಸಂಪೂರ್ಣ ಕೈಬಿಟ್ಟರು ಪದವಿ ನಂತರ ಉದ್ಯೋಗವಕಾಶಗಳು ಲಭ್ಯವಾದರೂ ಸರಸ್ವತಿ ಬರೊಡದ ಎಂ.ಎಸ್. ವಿಶ್ವವಿದ್ಯಾನಿಲಯದಲ್ಲಿ ಉನ್ನತ ಶಿಕ್ಷಣಕ್ಕೆ ತೆರಳಿದರು ನಂತರ 1965ರಲ್ಲಿ IOWA ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣ ಪಡೆಯಲು ತೆರಳಿದರು. ಈ ಹಂತದಲ್ಲಿ ಅವರ ಹೆತ್ತವರು ಅವರ ಅಮೇರಿಕಾ ವಾಸ್ತವ್ಯದ ಬಗ್ಗೆ ತೀವ್ರ ಚಿಂತಿತರಾಗಿದ್ದರು.

ಅಮೇರಿಕಾ ವಾಸ್ತವ್ಯದ ವೇಳೆಯಲ್ಲಿ ಶಿಕ್ಷಣದ ಕುರಿತ ಸರಸ್ವತಿಯವರ ಧೋರಣೆಗಳು ಸ್ಪಷ್ಟವಾಗಿದ್ದವು. ಆದರೆ ತಮ್ಮ ಆಲೋಚನೆಗಳು ಕಾರ್ಯರೂಪಕ್ಕೆ ತರುವ ಅವಕಾಶ ಅವರಿಗೆ ದಕ್ಕಿದ್ದು 1975ರಲ್ಲಿ ಸಂಶೋಧನೆ ಮತ್ತು ಅಧ್ಯಯನ ಕೇಂದ್ರದ ರಾಜ್ಯ ಸಂಪನ್ಮೂಲ ಕೇಂದ್ರವನ್ನು ಸೇರಿದಾಗ ರಾಷ್ಟ್ರೀಯ ವಯಸ್ಕರ ಶಿಕ್ಷಣದ ಹಲವು ಚಿಂತನೆಗಳ ಬಗ್ಗೆ ಅವರು ಯೋಚಿಸಿದರು. ಆಗ ಹತ್ತು ದಿನಗಳ ಹಳ್ಳಿ ಶಿಬಿರಗಳನ್ನು ಆಯೋಜಿಸಲಾಗುತ್ತಿತ್ತು. ಆ ಶಿಬಿರಗಳು ಯಾರ ಅಗತ್ಯಕ್ಕಾಗಿ ಎಂಬ ಪ್ರಶ್ನೆಯನ್ನು ಯಾರೂ ಕೇಳುತ್ತಿರಲಿಲ್ಲ. ಎನ್ನುತ್ತಾರೆ ಸರಸ್ವತಿ. ಇದು ಅಕ್ಷರಸ್ಥರು ಅನಕ್ಷರಸ್ಥರು ಅಕ್ಷರದ ಅರಿವು ಪಡೆದವರು ಎಲ್ಲರು ಭಾಗವಹಿಸುವ ಶಿಬಿರ ಈ ವೈವಿಧ್ಯಕ್ಕೆ ತಕ್ಕಂತೆ ಶಿಬಿರದ ಅಧ್ಯಯನ ಕ್ರಮಗಳು ವೈವಿಧ್ಯಮಯವಾಗಿರಲಿಲ್ಲ. ಸರಸ್ವತಿ ಇಂತಹ ಶಿಬಿರಕ್ಕಾಗಿ

ತಿರುಕೊಸ್ತಿಯುರ್‌ಗೆ ಹೋಗಿದ್ದರು. ಅಲ್ಲಿ ಹಳ್ಳಿಯವರು ಎದುರಿಸುವ ಸಮಸ್ಯೆ ಕುರಿತಂತೆ ಪಠ್ಯ ಸಿದ್ಧಗೊಳಿಸಲಾಗಿತ್ತು. ಅವರು ಅದರ ಕುರಿತು ವಿಸ್ತಾರವಾಗಿ ಚರ್ಚಿಸ ಬೇಕಿತ್ತು. ಇದನ್ನು ಅವರು ಶಿಕ್ಷಣದ ಅಗತ್ಯವಿಲ್ಲದೆಯೇ ಅತ್ಯುತ್ತಮವಾಗಿ ನಿರ್ವಹಿಸಿದ್ದರು. ಈ ಅಂಶ ಸರಸ್ವತಿಯವರನ್ನು ಗಂಭೀರವಾಗಿ ಕಾಡಿತು. ಅವರನ್ನು ಯಾವ ಅರ್ಥದಲ್ಲಿ 'ಅಕ್ಷರಸ್ಥ'ರನ್ನಾಗಿಸ ಬೇಕು ಎಂದು ಅವರು ಚಿಂತಿಸಿದರು. ಶಿಕ್ಷಣದ ಹಿನ್ನಲೆ ಇಲ್ಲದೇ ಅವರು ಅರ್ಥಶಾಸ್ತ್ರದ ಅತ್ಯುತ್ತಮ ಹಿನ್ನೆಲೆ ಪಡೆದಿದ್ದರು ಕೇವಲ ಮಾತನಾಡುವ ಭಾಷೆಯಲ್ಲಿ ಅವರು ಅಕ್ಷರಸ್ಥರಾದರೆ ಸಾಕೆ ಎಂಬುದು ಸರಸ್ವತಿಯವರನ್ನು ಕಾಡಿದ ಪ್ರಶ್ನೆಯಾಗಿತ್ತು.

ಈ ಹಂತದಲ್ಲೇ ಸರಸ್ವತಿ ತಮ್ಮ ಆಸಕ್ತಿಯ ಬಹು ಮುಖ್ಯ ಪಾಠವನ್ನು ಕಲಿತರು, ಆದೆಂದರೆ ಜನರು ಹೇಳುವುದನ್ನು ಕೇಳುವುದು ಮತ್ತು ಅವರ ಮೇಲೆ ಯಾವುದನ್ನು ಹೇರದಿರುವುದು. ಸರಸ್ವತಿ ಒಂದು ಸ್ವಾರಸ್ಯಕರ ಘಟನೆ ನೆನಪಿಸಿಕೊಳ್ಳುತ್ತಾರೆ. ಅವರು ಶಿಬಿರದಲ್ಲಿ ತರಬೇತಿ ನೀಡುವುದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಮುದುಕನೊಬ್ಬ ಶಿಬಿರದ ನಂತರ ಅವರನ್ನು ಭೇಟಿಯಾಗಿ ಒಂದು ಸ್ವಾರಸ್ಯಕರ ಗಣಿತದ ಒಗಟನ್ನು ಹೇಳಿದ. ಅವನು ಅನಕ್ಷರಸ್ಥ, ಆದರೆ ಇಂತಹ ಹಲವು ಒಗಟುಗಳನ್ನು ಬಾಯಲ್ಲೇ ಹೇಳಬಲ್ಲವನಾಗಿದ್ದ. ಇದು ಸರಸ್ವತಿಯವರಲ್ಲಿ ಇಂತಹ ಜನರ ಜೀವನ ವಿಧಾನ ಬಾಯಲ್ಲೇ ಕಠಿಣ ಲೆಕ್ಕಗಳನ್ನು ಸುಲಭವಾಗಿ ಬಿಡಿಸಬಲ್ಲ ಸಾಮರ್ಥ್ಯದ ಬಗ್ಗೆ ಆಸಕ್ತಿ ಮೂಡುವಂತೆ ಮಾಡಿತು. ಅವರಿಗೆ ಸಂಖ್ಯಾಶಾಸ್ತ್ರದ ಕಿರು ಪರಿಚಯ ಕೂಡ ಬದಲಾವಣೆ ತರಬಲ್ಲದಾಗಿತ್ತು. ಈ ಕುರಿತ ಚಿಂತನೆಗಳಿಗೆ ನವದೆಹಲಿಯಲ್ಲೊಬ್ಬರು ಪರಿಹಾರ ಹೇಳಲು ಸಿದ್ಧರಾದರು. ಆದರೆ ಇದು ಸೂಕ್ತ ಪರಿಹಾರದ ಮಾರ್ಗವಲ್ಲ ಎಂದು ಸರಸ್ವತಿ ನಿರ್ಧರಿಸಿದರು. ಸಮಸ್ಯೆ ವ್ಯಕ್ತಿಗಳದಲ್ಲಾ ಬದಾಲಗಿ ಕಾಣ್ಕೆಯಲ್ಲಿದೆ ಎಂಬುದು ಅವರಿಗೆ ಅರಿವಾಗಿತ್ತು. ರಾಜ್ಯ ಸಂಪನ್ಮೂಲ ಕೇಂದ್ರ, ಇಂತಹ ವ್ಯಕ್ತಿಗಳಿಗಾಗಿ ಗಣಿತದ ಕುರಿತು ಸ್ವತಂತ್ರವಾಗಿ ಚಿಂತಿಸುವ ಕೇಂದ್ರವನ್ನು ಅವರು ಆರಂಭಿಸಿದರು. ಗಣಿತದ ಹೊಸ ಜಗತ್ತೇ ಅವರೆದರು ತೆರೆದು ಕೊಂಡಿತು.

ಸರಸ್ವತಿ, ದೇಹದ ಭಾಗಗಳನ್ನು ಉಪಯೋಗಿಸಿ ಮಾಡುವ ಲೆಕ್ಕ ಬ್ರಿಟಿಷ್ ಗಣಿತದ ಕ್ರಮಕ್ಕೆ ಹೊಂದುವುದನ್ನು ಪತ್ತೆ ಹಚ್ಚಿದರು, ಅಡಿ, ಮಾರು ಮುಂತಾದ ಅಳತೆ ಕ್ರಮದಲ್ಲಿ ಕೈ ಬಳಕೆಯಾಗುವುದನ್ನು ಗಮನಿಸಿದರು. ಆದರೆ ಮೆಟ್ರಿಕ್ ಅಳತೆ ಕಾಗದ ಪೆನ್ ಅವಲಂಬಿಸಿದರೆ, ಜನಸಮಾನ್ಯರ ಗಣಿತ ದೈನಂದಿನ ವ್ಯವಹಾರವನ್ನು ಅವಲಂಭಿಸಿರುತ್ತದೆ ಎಂಬುದೂ ಅವರ ಗಮನಕ್ಕೆ ಖಂದಿತು ಹಳ್ಳಿ ಹೆಣ್ಣನ್ನು ಒಲೆಯ ಅಳತೆ ಕೇಳಿದರೆ ಎಷ್ಟು ಕಟ್ಟಿಗೆ ಇಡಬಲ್ಲದು ಎಂಬ ಅರ್ಥದಲ್ಲಿ ವಿವರಿಸುತ್ತಾಳೆ. ಹಗ್ಗ ಅಂಗಡಿಯಲ್ಲಿ ಕೇಳುವಾಗ ಈ ಜನ ಯಾವ ಕೆಲಸಕ್ಕೆ ಎಂದು ಹೇಳಿ ಪಡೆಯುತ್ತಾರೆ. ಚಾಪೆ ಹೆಣೆಯುವವರು ಎಷ್ಟು ಜನ ಕುಳಿತುಕೊಳ್ಳ ಬಲ್ಲರು, ಅಥವಾ ಎಷ್ಟು ಜನ ಮಲಗಬಲ್ಲರು ಎಂಬ ಅರ್ಥದಲ್ಲಿ ಚಾಪೆಯ ಅಳತೆ ಹೇಳುತ್ತಾರೆ. ಸರಸ್ವತಿ ಮಗ್ಗ ನೇಯುವವನೊಬ್ಬನ ಬಳಿ ಆ ಕಡೆ ಸಂಚರಿಸಿದಾಗಲೆಲ್ಲಾ 'ಸಮಯ ಎಷ್ಟು ?' ಎಂದು ಕೇಳುವ ಪರಿಪಾಠ ಇಟ್ಟುಕೊಂಡಿದ್ದರು. ಅವರ ಕೈಯಲ್ಲಿ ವಾಚ್ ಇದ್ದರೂ ಈ ಗಣಿತದ ಶಿಷ್ಯ ಪತ್ತೆಹಚ್ಚಲೆಂದೇ ಪ್ರಶ್ನೆ ಕೇಳುತ್ತಿದ್ದರು. ಕುತೂಹಲಕರ ಸಂಗತಿ ಎಂದರೆ ಪ್ರತಿಬಾರಿಯೂ ಅವನ ಉತ್ತರ ನಿಖರವಾಗಿರುತ್ತಿತ್ತು. ಇದು ಹೇಗೆ ಎಂದು ಕೇಳಿದರೆ ಆ ವ್ಯಕ್ತಿ ನಿಮ್ಮ ನೆರಳಿನ ಅಳತೆ ಮೇಲೆ ಸಮಯ ಹೇಳುತ್ತೇವೆ ಎಂದ. ಹೀಗೆ ಈ ವ್ಯಕ್ತಿಗಳು ಮಾಡುವ ಪ್ರತಿ ಲೆಕ್ಕಾಚಾರವೂ ದೈನಂದಿನ ಬದುಕನ್ನು ಅವಲಂಬಿಸಿದೆ ಎಂದು ಸರಸ್ವತಿ ಅರ್ಥ ಮಾಡಿ ಕೊಂಡರು.

ಸರಸ್ವತಿ ತಮ್ಮ ಸಂಶೋಧನೆ ಮುಗಿಸಿದರು ಅವರ ಲೇಖನಗಳು ಉತ್ತಮವಾಗಿ ಗ್ರಹಿತಲ್ಪಟ್ಟವು, ಪ್ರಕಟವಾದವು. ಆದರೆ ಅವೆಲ್ಲ ಬಹುತೇಕ ಸಂಶೋಧನಾ ಲೇಖನಗಳಾಗಿ ಉಳಿದವು. 18 ವರ್ಷಗಳ ನಂತರ ಮತ್ತೆ ಅಂತಹ ಶಿಬಿರದಲ್ಲಿ ಭಾಗವಹಿಸಿದಾಗ ಅಧ್ಯಯನಕ್ರಮ ಏನೂ ಬದಲಾಗದಿದ್ದನ್ನು ನೋಡಿ ಸರಸ್ವತಿ ಆಶ್ಚರ್ಯ ಪಟ್ಟರು. ಆದರೆ ಸೇಡಿನ ಕಹಿ ಉಳಿಸಿ ಕೊಳ್ಳಲಿಲ್ಲ ಹಿಂದೆ ಬಾಲ್ಯದಲ್ಲಿ ಅವರು ನೋವನ್ನು ಎಷ್ಟು ದೃಡತೆಯಿಂದ ಎದುರಿಸಿದ್ದರೊ ಅಂತಹದೇ ದೃಡತೆಯಿಂದ ಈ ಸವಾಲುಗಳನ್ನು ಎದುರಿಸಿದರು. ಅವರ ಮನೆಯಿಂದ ಹಿಂತಿರುಗಿದಾಗ ಇನ್ನು ಎಷ್ಟು ವರ್ಷ ಈ ಅಗಾಧ ಜ್ಞಾನ ಅಜ್ಞಾತವಾಗಿ ಉಳಿಯುವುದು ಎಂಬ ಚಿಂತೆ ನಮ್ಮನ್ನು ಕಾಡುತ್ತಿತ್ತು.

### ಲೇಖಕಿಕುರಿತು

ಸಿ.ಎಸ್. ಲಕ್ಷ್ಮಿಯವರು ಸ್ವತಂತ್ರ ಸಂಶೋಧನೆ ಮತ್ತು ಲೇಖಕಿಯಾಗಿದ್ದು. ತಮಿಳಿನಲ್ಲಿ ಅಂಬೈ ಎಂಬ ಕಾವ್ಯ ನಾಮದಲ್ಲಿ ಬರೆಯುತ್ತಾರೆ. ಅವರು SPARROW (Sound and Picture Archives For Researches on Women)ನ ಸ್ಥಾಪಕಿ

# ಕಹಿ ನೆನಪುಗಳನ್ನು ಹೊತ್ತು ನಗುತ್ತಾ ಸುಖದಿಂದ ಬಾಳಲು ಸಾಧ್ಯವೆ! ?.......

ಇಂದಿರಾಗಾಂಧಿ ಹತ್ಯೆಗೊಂಡ ಸಮಯದಲ್ಲಿ ಇಡೀ ಒಂದು ಸಮುದಾಯವನ್ನ ಗುರಿಯಾಗಿಟ್ಟುಕೊಂಡು ನಡೆದ ಕೋಮುದಳ್ಳುರಿಯಲ್ಲಿ ತನ್ನ ಗಂಡನನ್ನು ಕಳೆದುಕೊಂಡ ನತದೃಷ್ಟ ಭಕ್ತಿ ಕೌರಳ ಭಯಾನಕ ಕಥೆಯಿದು.

ಭಕ್ತಿ ಕೌರ್‌ಳ ತಂದೆ ತಾಯಿ ಮೂಲತಃ ಪಾಕಿಸ್ತಾನದವರು. ದೇಶ ಇಬ್ಭಾಗವಾದಾಗ ಭಾರತದ ರಾಜಸ್ತಾನದ ಭರತ್‌ಪುರ್‌ಗೆ ಬಂದು ನೆಲೆಸಿದವರು. ಒಟ್ಟು ಏಳು ಮಂದಿ ಮಕ್ಕಳಿದ್ದ ಕಾರಣ ಕುಟುಂಬದ ನಿರ್ವಹಣೆಗೆ ಆಕೆ ತಂದೆ ತಾಯಿ ತುಂಬಾ ಕಷ್ಟ ಪಡುತ್ತಿದ್ದರು, ಭಕ್ತಿ ಕೌರ್ ಓದು ಬರಹ ತಿಳಿದವರಲ್ಲ. ಬಾಲ್ಯದಲ್ಲಿ ತನ್ನ ಸಹೋದರ ಸಹೋದರಿಯರು ಓದುತ್ತಿದ್ದಾಗ ಅವರೊಟ್ಟಿಗೆ ಕಲಿತದ್ದು ಸ್ವಲ್ಪ ಓದು.

ಚಿಕ್ಕ ವಯಸ್ಸಿನಲ್ಲೇ ಕೃಷಿಕ ಮನೆಗೆ ಭಕ್ತಿ ಕೌರ್‌ಳ ಮದುವೆಯಾಯಿತು. ಬೇಸಾಯದ ಜೀವನ ಕಷ್ಟವೆನಿಸಿ ತನ್ನ ಕುಟುಂಬದೊಂದಿಗೆ ಕೆಲಸ ಅರಸಿ ಬಂದು ದೆಹಲಿಯ ಶಹದಾರದಲ್ಲಿ ನೆಲಸಿದ್ದರು. ಅಷ್ಟೊತ್ತಿಗೆ ಏಳು ಮಕ್ಕಳಾಗಿದ್ದರು.

1976 ರ ತುರ್ತು ಪರಿಸ್ಥಿತಿಯಲ್ಲಿ ಇವರ ಗುಡಿಸಲುಗಳನ್ನು ಕಿತ್ತೊಗೆದ ಕಾರಣ, ತ್ರಿಲೋಕ್‌ಪುರಿಯಲ್ಲಿ ಅಂದಿನ ಸರ್ಕಾರ ಪುನರ್‌ವಸತಿಯನ್ನು ನೀಡಿತು. ಗಂಡ ಟ್ರಕ್ ಮತ್ತು ರಿಕ್ಷಾ ಚಾಲಕನಾಗಿದ್ದರಿಂದ ನಂತರ ಸ್ವಲ್ಪ ನೆಮ್ಮದಿ ಜೀವನ ಸಾಗಿಸುತ್ತಿದ್ದರು.

1984ರ, ಅಕ್ಟೋಬರ್ 31ರಂದು ತನ್ನ ಸಿಕ್ ಅಂಗ ರಕ್ಷಕರಿಂದ ಅಂದಿನ ಪ್ರಧಾನ ಮಂತ್ರಿ ಇಂದಿರಾಗಾಂಧಿ ಹತ್ಯೆಗೊಂಡಾಗ ತುಂಬಾ ಅನಾಹುತವಾಗುತ್ತದೆಂದು ಯಾರೂ ಊಹಿಸಿರಲಿಲ್ಲ. ಹತ್ಯೆಗೆ ಪ್ರತಿಕಾರವಾಗಿ ಸಿಖ್ಖರ ನರಮೇಧ, ಭಾರತದ ಇತಿಹಾಸದಲ್ಲಿ ಕಪ್ಪು ಚುಕ್ಕೆಯಾಗಿರುವ ಈ ಘಟನೆ ಭಕ್ತಿ ಕೌರ್‌ಳ ಜೀವನದಲ್ಲಿ ಎಂದೂ ಮರೆಯಲಾಗದ್ದು.

ಭಕ್ತಿ ಕೌರ್ ವಾಸಿಸುತ್ತಿದ್ದ ತ್ರಿಲೋಕ್‌ಪುರಿ ಬಡಾವಣೆ ಪೂರ್ತಿ ಸರದಾರರು ವಾಸವಾಗಿದ್ದ ಪ್ರದೇಶ. ಹತ್ಯೆಯ ಘಟನೆಯ ಮರು ದಿನ ಬೆಳಗ್ಗೆಯೇ ಛತ್ತೀಸ್ ಪುರ್‌ನ ಗುರುದ್ವಾರದ ಕಡೆಯಿಂದ ದೊಡ್ಡ ಚೀತ್ಕಾರ ಕೇಳಿ ಬರಹತ್ತಿತ್ತು. "ಗುರುದ್ವಾರವನ್ನು ರಕ್ಷಿಸಿ, ಅವರು ಬಂದಿದ್ದಾರೆ, ಬೆಂಕಿ ಹಚ್ಚಿ ಬೂದಿ ಮಾಡಿದ್ದಾರೆ " ಎಂದು ಜನರು 'ಓಡುತ್ತಾ ಬರುತ್ತಿರುವಾಗ ಹೇಳುತ್ತಿದ್ದರು. ಸುತ್ತಮುತ್ತ ಹೆಚ್ಚು ಅನಾಹುತಗಳಾದ ಸುದ್ದಿ ಹರಡುತ್ತಿದ್ದಂತೆ, ಭಕ್ತಿ ಕೌರ್‌ಳ ಮನೆ ಮಂದಿಯೆಲ್ಲಾ ಮನೆಯೊಳಗೆ ಅವಿತುಕೊಂಡು ಜೀವ ರಕ್ಷಣೆಗೆ ಒದ್ದಾಡುವಂತಾಯಿತು. ಈ ದಳ್ಳುರಿಯಲ್ಲಿ ಹಲವಾರು ಸರದಾರರ ಹೆಣ್ಣು ಮಕ್ಕಳು ಅತ್ಯಾಚಾರಕ್ಕೆ ಒಳಗಾದರು, ಸಾವಿರಾರು ಜನರನ್ನು ಹೊಡೆದು ಹಾಕಿದರಲ್ಲದೇ, ಕೆಲವರನ್ನು ಸಜೀವ ದಹನ ಮಾಡಿದರು.

ಪ್ರಾಣಭಯದಿಂದ ಮನೆಯಲ್ಲೇ ಅವಿತುಕೊಂಡಿದ್ದ ಭಕ್ತಿ ಕೌರ್‌ಳ ಗಂಡನಿಗಾಗಿ ಹಲವಾರು ಬಾರಿ ದುಷ್ಕರ್ಮಿಗಳು ತಲಾಶೆ ಮಾಡಿದರು. ಆದರೆ ಆತನನ್ನು ಮಂಚದಡಿಯಲ್ಲಿ ಬಚ್ಚಿಟ್ಟದ್ದರಿಂದ ಅವರ ಕಣ್ಣಿಗೆ ಬೀಳಲಿಲ್ಲ. ಹೀಗೆ ಮೂರು ನಾಲ್ಕು ಬಾರಿ ಇಡೀ ಮನೆಯನ್ನು ಜಾಲಾಡಿದರೂ ಕೌರ್‌ಳ ಗಂಡ ದೊರಕಲಿಲ್ಲ.

ಕೋಮುದಳ್ಳುರಿಯಲ್ಲಿ ಇಡೀ ಬಡಾವಣೆಯೇ ಉರಿಯುತ್ತಿತ್ತು. ಅದೇ ಸಂದರ್ಭದಲ್ಲಿ ಮತ್ತೆ ಬಂದ ಮಂದಿ, ಮಂಚದ ಕೆಳಗೆ, ಜಮಖಾನೆಯಡಿಯಲ್ಲಿ ಮಲಗಿದ್ದ ಭಕ್ತಿ ಕೌರಳ ಪತಿ ಕಾಣಿಸಿ ಕೊಂಡಾಗ, ಆತನನ್ನು ಹೊರಗೆ ಬರುವಂತೆ ಬಲವಂತ ಮಾಡಿದರು. "ಹೊರಗೆ ಬಂದರೆ ನನ್ನನ್ನು ಕೊಲ್ಲುವಿರೆಂದು, ನನ್ನ ಮಕ್ಕಳ ಸಲುವಾಗಿ ನನ್ನನ್ನು ಬಿಟ್ಟು ಬಿಡಿ" ಎಂದು ಪರಿ ಪರಿಯಾಗಿ ಬೇಡಿಕೊಂಡರೂ, ಬಲವಂತವಾಗಿ ಹೊರಗೆಳೆದು ಇಟ್ಟಿಗೆಗಳಿಂದ ಹೊಡೆದು, ಕಬ್ಬಿಣದ ಸಲಾಕೆ, ಮುಚ್ಚುಗತ್ತಿಯಿಂದ ಕಡಿದು ಹಾಕಿದರು. ಆತನ ಚೀತ್ಕಾರ ಗಗನ ಮುಟ್ಟಿತು. ಆತ ಮಕ್ಕಳನ್ನು ಕರೆಯುತ್ತಿದ್ದ, ಕೌರ್‌ಗಳಿಗಾಗಿ ಕೂಗುತ್ತಿದ್ದ. ಆತ ಸತ್ತೆ ಹೋದಂತಿದ್ದ. ಒಮ್ಮೆ ನೋವಿನಿಂದ ಚೀರಿದಾಗ, "ಈತನಿಗೆ ಇನ್ನೂ ಜೀವವಿದೆ " ಎಂದು ಹತ್ತಿರ ಬರುವಷ್ಟರಲ್ಲಿ ಆತ ಮತ್ತೆ ಪ್ರಜ್ಞೆ ಕಳಕೊಂಡಿದ್ದರಿಂದ ಸತ್ತು ಹೋಗಿದ್ದಾನೆಂದು ತಿಳಿದರು. ಹತ್ತು ಹದಿನೈದು ನಿಮಿಷಗಳ ನಂತರ ಆತನಿಗೆ ಪ್ರಜ್ಞೆ ಬಂದಾಗ, ನೋವಿನಿಂದ ಚೀರ ತೊಡಗಿದರು ಮತ್ತು ಕೌರ್‌ಳನ್ನು ಮಗ ಹರಿಯನ್ನು ಹಲುಬ ತೊಡಗಿದ. ಎಲ್ಲರನ್ನು ಹತ್ತಿರಕ್ಕೆಳೆದುಕೊಂಡು ನೋವನ್ನು ಸಹಿಸದೇ, ಚಡಪಡಿಸುತ್ತಿದ್ದ.

ಆ ಮಂದಿ ಮತ್ತೆ ಬಂದರು. ಈ ಸೂಳೇಮಗ ಇನ್ನೂ ಜೀವದಲ್ಲಿದ್ದಾನೆ. ಇನ್ನೂ ಹೊಡೆಯಿರಿ ಎಂದು ಅರಚ ಹತ್ತಿದರು. ನಂತರ ಕೌರ್‌ಳ ಬಳಿ ಬಂದು "ನೀನು ಇಲ್ಲಿಂದ ಹೋಗದಿದ್ದರೆ, ನಿನ್ನನ್ನು ಬಲಾತ್ಕರಿಸಲು ಮುಂದಾಗುವೆವು" ಎಂದರು. ಕೌರ್‌ಳಿಗೆ ಒಂಬತ್ತು ವರ್ಷದ ಮಗಳಿದ್ದರಿಂದ, ತನ್ನ ಮೇಲೆ ಹಾಗೂ ಮಗಳ ಮೇಲೆ ಅತ್ಯಾಚಾರ ಮಾಡುತ್ತಾರೆಂದು ಹೆದರಿ, ತನ್ನ ಗಂಡನನ್ನು ಅಲ್ಲೆ ಬಿಟ್ಟು ಮಕ್ಕಳೊಂದಿಗೆ ಬೇರೊಬ್ಬರ ಮನೆಗೆ ಶರಣಾರ್ಥಿಯಾಗಿ

ಹೋದಳು. ಆಕೆಗೆ ತನ್ನ ಗಂಡ ಎಲ್ಲಿರುವರೆಂಬ ಮಾಹಿತಿ ಸಿಗಲಿಲ್ಲ. ಆತ ಜೀವಸಿದ್ದಾನೋ, ಇಲ್ಲವೋ ತಿಳಿದಿಲ್ಲ. ತನ್ನ ಪತಿಯ ಮೃತದೇಹವನ್ನು ಕೌರ್‌ಳು ಕಂಡಿಲ್ಲ. ಇದ್ದಕ್ಕಿದಂತೆ ಆತ ಅವರುಗಳ ಜೀವನದಿಂದ ಹೊರಟುಹೋದ. ಅವರ ಇಡೀ ಕುಟುಂಬದಲ್ಲಿ ಒಟ್ಟು ಹನ್ನೆರಡು ಪುರುಷರನ್ನು ಕಳೆದುಕೊಂಡರು. ಅವರ ಮಕ್ಕಳ ಸ್ಥಿತಿ !?.... ನಂತರ ಜೀವನೋಪಾಯಕ್ಕೆ ಜಯಾ ಶ್ರೀವಾಸ್ತವ್ ಅವರ ಶಿಶುವಿಹಾರದಲ್ಲಿ ಕೆಲಸಕ್ಕೆ ಸೇರಿ ತನ್ನ ಮಕ್ಕಳನ್ನು ಪೋಷಿಸಿ, ಇಂದು ಅವರನ್ನು ಒಂದು ಸ್ಥಿತಿಗೆ ತಂದಿದ್ದಾಳೆ. ದುಃಖದಲ್ಲಿದ್ದ ಕೌರ್ ಅಂತಹ ಮಹಿಳೆಯರಿಗೆ ವಿಧವೆಯಾಗಿ ಜಯಾ ಶ್ರೀವಾಸ್ತವ್ ಕೆಲಸ ನೀಡಿದ್ದಾರೆ, ಆತ್ಮವಿಶ್ವಾಸ ತುಂಬಿದ್ದಾರೆ. ಮಾನಸಿಕವಾಗಿ ಬೆಂಬಲ ನೀಡಿ ಸಲುಹಿದ್ದಾರೆ.

ಭಕ್ತಿಕೌರ್ ಈಗಿನ ಎಲ್ಲಾ ಪ್ರಶ್ನೆಗಳನ್ನು ಮೆಲಕು ಹಾಕುವಾಗ. ಅಂದಿನ ದೃಶ್ಯಗಳು ಕಣ್ಣು ಮುಂದೆ ಹಾಯುವಾಗ ಗಾಯ ಮತ್ತೆ ಬಿರಿಯುತ್ತದೆ. ನೀವು ಎಷ್ಟೇ ಮುಲಾಮು ಹಚ್ಚಿ, ಗಾಯ ಮಾಸಿದರೂ, ಕಲೆ ಉಳಿಯುತ್ತೆ. ಗಾಯ ಗುಣವಾಗಬಹುದು, ಆದರೆ ಚರ್ಮ ಮೊದಲಿನಂತೆ ನುಣುಪಾಗಿ ಉಳಿಯಲಾರದು. ಒಂದು ಗಾಯ ದೇಹದ ಮೇಲೆ ಕಲೆಯನ್ನು ಉಳಿಸಿಯೇ ಬಿಡುತ್ತದೆ. ಆ ಘಟನೆ ಕೂಡಾ ಅದೇ ರೀತಿಯದು. ನನ್ನ ಹೃದಯಕ್ಕೆ ಬೆಂಕಿ ಬಿದ್ದಾಗಲೆಲ್ಲಾ ಜ್ವಾಲೆಗಳು ಹೊಮ್ಮುತ್ತದೆ. ಆದರೆ ಇಂತಹ ಘಟನೆಗಳು ಮತ್ತೆ ಮತ್ತೆ ಉದ್ಭವಿಸದಿರಲೆಂದೇ ಬಯಸುತ್ತೇನೆ. ಹಾಗೇ ನನ್ನ ಮಕ್ಕಳನ್ನು ಹಿಂದುಗಳ ವಿರುದ್ಧ ನಾನೆಂದೂ ಪ್ರಚೋದಿಸಿಲ್ಲ. ಹಿಂದುಗಳು, ಮುಸಲ್ಮಾನರು, ಸಿಖ್ಖರು ಮತ್ತು ಕ್ರಿಶ್ಚಿಯನ್‌ರು ಎಲ್ಲರೂ ಒಂದು. ಎಲ್ಲರನ್ನೂ ಒಂದೇ ದೃಷ್ಟಿಕೋನದಿಂದ ನೋಡ ಬೇಕಾಗಿದೆ. ಆದರೆ ನಮಗೆ ಹೀಗೆ ಮಾಡಿದವರಿಗೂ, ನಾವೇನೂ ಕೆಟ್ಟದ್ದನ್ನು ಮಾಡಿಲ್ಲ, ಅಲ್ಲವೇ ? ನಾನು ಅವರಿಗಾಗಿ ಪ್ರಾರ್ಥಿಸುತ್ತೇನೆ ಮತ್ತು ಅವರನ್ನು ಆಶೀರ್ವದಿಸುತ್ತೇನೆ. "ಸುಖದಲ್ಲಿರಿ, ನಮ್ಮ ಬದುಕಂತೂ ಜೀವಂತ ಮರಣ ದಂತೆ ನಿಮಗೆ ಯಾಕೆ ಅಂತಹ ಜೀವಂತ ಮರಣ? ದೇವರು ನಿಮ್ಮನ್ನು ಸದಾ ಸಂತೋಷದಲ್ಲಿ ಇಟ್ಟರಲಿ. ಇದೇ ನನ್ನ ಹಾರೈಕೆ. ಒಂದೇ ಕುಟುಂಬದ ಹನ್ನೆರಡು ಸದಸ್ಯರು ಒಂದೇ ದಿನದೊಳಗೆ ಕೊಲೆಗೀಡಾದರೆ, ಆ ವ್ಯಕ್ತಿಯ ಮನಸ್ಸಿನ ಕೋಲಾಹಲ ಎಂತದ್ದಿರಬಹುದು ? ನೀವೆ ಹೇಳಿ. ಆ ವ್ಯಕ್ತಿ ನಗುತ್ತಾ, ಸುಖದಿಂದ ಬದುಕಲು ಸಾಧ್ಯವೇ ? ಎಂದಳು.

ನಿಜ. ಆ ನೋವು, ಕಷ್ಟ ಅನುಭವಿಸಿದವರಿಗೇ ಮಾತ್ರವೇ ತಿಳಿಯುತ್ತದೆ. "ರಕ್ತದ ಬದಲು ರಕ್ತ" ಎಂಬುದು ಈ ಘಟನೆಯಿಂದ ತಿಳಿಯುತ್ತದೆ. ಹತ್ಯೆಗೆ ಪ್ರತಿಕಾರವಾಗಿ ಸಿಖ್ಖರ ನರಮೇಧ ಎಷ್ಟು ತಾನೇ ಸರಿ. ಆ ಜನರಲ್ಲಿ ಈಗಲೂ ನಿರಾಶೆಯ ಕರ್ಮೋಡ ಕವಿದಿದೆ.

ಭಾರತದ ಇತಿಹಾಸದಲ್ಲೇ ಕಪ್ಪು ಚುಕ್ಕೆಯಾಗಿರುವ ಈ ಘಟನೆಗೆ ಸಂಬಂಧಿಸಿದಂತೆ ಕಳೆದ ಡಿಸೆಂಬರ್‌ನಲ್ಲಿ ದೆಹಲಿ ಹೈಕೋರ್ಟ್ ಒಂದು ತೀರ್ಪನ್ನು ನೀಡಿದೆ.

ಹದಿನೆಂಟು ವರ್ಷಗಳ ಹಿಂದೆ ದೇಶವನ್ನು ತಲ್ಲಣಗೊಳಿಸಿದ್ದ ಸಿಖ್ ವಿರೋಧಿ ದೊಂಬಿ ಪ್ರಕರಣ ಸಂಬಂಧ ಹಿರಿಯ ಕಾಂಗ್ರೆಸ್ ನಾಯಕ ಸಜ್ಜನ್ ಕುಮಾರ್ ಮತ್ತು ಇತರ 16 ಮಂದಿಯನ್ನು ದೆಹಲಿ ಹೈಕೋರ್ಟ್ ಖುಲಾಸೆಗೊಳಿಸಿದೆ. ಇವರ ವಿರುದ್ಧ ಆರೋಪ ಸಾಬೀತು ಪಡಿಸಲು ಸೂಕ್ತ ಸಾಕ್ಷ್ಯಾಧಾರಗನ್ನು ಒದಗಿಸಲು ಪ್ರಾಸಿಕ್ಯೂಶನ್ ವಿಫಲವಾದ್ದರಿಂದ ಅವರನ್ನು ಆರೋಪ ಮುಕ್ತಗೊಳಿಸಲಾಗಿದೆ.

1984ರ ಅಕ್ಟೋಬರ್ 31 ರಲ್ಲಿ ಪ್ರಧಾನಿ ಇಂದಿರಾಗಾಂಧಿ ಅವರ ಹತ್ಯೆ ನಂತರ ದೆಹಲಿಯಲ್ಲಿ ನಡೆದ ಸಿಖ್ ವಿರೋಧಿ ಹಿಂಸಾಚಾರ ಭುಗಿಲೆದ್ದಿತ್ತು. ಆ ಘಟನೆ ಸಂಬಂಧ ಎರಡು ಪ್ರಕರಣಗಳಲ್ಲಿ ಸಜ್ಜನ್ ಮತ್ತು ಇತರನ್ನು ಆರೋಪಿಗಳೆಂದು ದಾಖಲಿಸಲಾಗಿತ್ತು. ಮೊದಲ ಪ್ರಕರಣದಲ್ಲಿ, ಸುಲ್ತಾನ್‌ಪುರಿ ಪ್ರದೇಶದಲ್ಲಿ 49 ಮಂದಿ ಹತ್ಯೆಗೆ ಕಾರಣವಾದ ಗಲಭೆಯನ್ನು ಪ್ರಚೋದಿಸಿದ ಆರೋಪದಲ್ಲಿ 11 ಮಂದಿ ವಿರುದ್ಧ ಪೋಲಿಸರು ಪ್ರಥಮ ಮಾಹಿತಿ ವರದಿ ತಯಾರಿಸಿದ್ದರು. ಅಲ್ಲದೇ ಅನ್ವರ್ ಕೌರ್ ಎಂಬುವರು ತಮ್ಮ ಪತಿಯ ಹತ್ಯೆಗೆ ಸಜ್ಜನ್ ಮತ್ತಿತರರೇ ಕಾರಣ ಎಂದು ನೀಡಿದ್ದ ದೂರಿನ ಹಿನ್ನೆಲೆಯಲ್ಲಿ ಸಿಬಿಐ ಪ್ರತ್ಯೇಕ ಪ್ರಕರಣ ದಾಖಲಿಸಿಕೊಂಡಿತ್ತು ಹಾಗೂ ಆರೋಪ ಪಟ್ಟಿ ದಾಖಲಿಸಿತ್ತು.

ಸಾಕ್ಷಿದಾರರು ನೀಡಿದ ಹೇಳಿಕೆಗಳು ಸಾಕಷ್ಟು ವ್ಯತಿರಿಕ್ತವಾಗಿದ್ದ ಕಾರಣ, ಪೊಲೀಸರು ಆರೋಪ ಸಾಬೀತು ಪಡಿಸಲು ವಿಫಲರಾಗಿದ್ದಾರೆ ಎಂದು ನ್ಯಾಯಾಲಯದ ತೀರ್ಪು ತಿಳಿಸಿದೆ. ಕೇವಲ ಮೂರು ಸಾಕ್ಷಿದಾರರನ್ನು ಮಾತ್ರ ವಿಚಾರಣೆಗೆ ಗುರಿಪಡಿಸಲಾಗಿದೆ.

ಹದಿನೆಂಟು ವರ್ಷಗಳ ಹಿಂದೆ ನಡೆದ ಮಾರಣಹೋಮದ ಆರೋಪಿಗಳಿಗೆ ಶಿಕ್ಷೆ ನೀಡಲು ಸಾಧ್ಯವಾಗಿಲ್ಲ. ಆದರೆ ಇತ್ತೀಚೆಗೆ ಸಂಸತ್ ಮೇಲೆ ದಾಳಿ ನಡೆಸಿದ ಉಗ್ರರಿಗೆ ಮರಣದಂಡನೆ ನೀಡಲಾಗಿದೆ.

ಆ ಗಲಬೆಯಲ್ಲಿ ಗಂಡನನ್ನು ಕಳೆದುಕೊಂಡಂತಹ ಭಕ್ತಿಕೌರ್ ಅವರಂತಹ ಮನಸ್ಸುಗಳು ಈ ತೀರ್ಪಿನಿಂದ ಎಂತಹ ಆಶಯನ್ನು ಈ ಕಾನೂನಿನಿಂದ ನಿರೀಕ್ಷಿಸಬಹುದು ! ನಮ್ಮಂತಹ ಸಾಮಾನ್ಯ ಜನರೇ ಈ ತೀರ್ಪಿನಿಂದ ದಿಗ್ಭ್ರಮೆ ಗೊಂಡಿರುವಾಗ, ಆ ಗಲಭೆಯಲ್ಲಿ ಏನೆಲ್ಲವನ್ನು ಕಳೆದುಕೊಂಡಂತಹ ಮನಸ್ಸುಗಳಿಗೆ ಹೇಗೆನಿಸಿರಬಹುದು ?

# "ಪಿ.ಯು.ಸಿ.ಎಲ್"ನ ವರದಿ

ರಾಜ್ಯ ಪಿ.ಯು.ಸಿ.ಎಲ್. ಬಳ್ಳಾರಿ ಜಿಲ್ಲೆ ಕಮಲಾಪುರದಲ್ಲಿ ಡಿಸೆಂಬರ್ 24 ಮತ್ತು 25 ರಂದು ನಡೆದ ಜಾತಿ ಸಂಘರ್ಷಗಳ ಬಗ್ಗೆ ತನಿಖೆ ನಡೆಸಲು ಸತ್ಯ ಶೋಧನ ಸಮಿತಿ ರಚಿಸಿತ್ತು. ಈ ಸಮಿತಿಯಲ್ಲಿ ಡಾ॥ವಿ.ಲಕ್ಷ್ಮೀನಾರಾಯಣ, ಪ್ರೊ॥ಹೆಚ್. ಗೋವಿಂದಯ್ಯ, ಪ್ರೊ॥ರಹಮತ್ ತರಿಕೆರೆ, ಕೋಟಿಗಾನಹಳ್ಳಿ ರಾಮಯ್ಯ, ಮನೋಹರ್, ಮಾರ್ಗರೆಟ್ ಮತ್ತು ಬರ್ನಾಡ್ ಇವರು ಸದಸ್ಯರಾಗಿದ್ದರು.

ಮೇಲ್ಕಂಡ ಸದಸ್ಯರ ಸಮಿತಿಯು ದಿನಾಂಕ 4.1.2003 ರಂದು ಹೊಸಪೇಟೆ, ಕಮಲಾಪುರ, ಮತ್ತಿತರ ಕಡೆ ಭೇಟಿ ನೀಡಿ ಸಮಾಜದ ವಿವಿಧ ಸ್ತರಗಳ ಜನರನ್ನು ಭೇಟಿ ಮಾಡಿತು. ಇದು ಸಂಗ್ರಹಿಸಿದ ಮಾಹಿತಿಯ ಆಧಾರದಲ್ಲಿ ನೀಡಿದ ಮಧ್ಯಂತರ ವರದಿಯು ಈ ಕೆಳ ಕಂಡಂತಿದೆ.

ಸಮಿತಿಯು ಪ್ರಥಮವಾಗಿ ಕಮಲಾಪುರದ ವೃತ್ತದಲ್ಲಿ ಡಾ॥ ಬಾಬಾಸಾಹೇಬ್ ಅಂಬೇಡ್ಕರರ ಪ್ರತಿಮೆಯ ಮೇಲೆ ಮಾಡಲಾದ ದಾಳಿಯ ಹಾನಿಯನ್ನು ಪರಿಶೀಲಿಸಿತು. ಪ್ರತಿಮೆಯನ್ನು ನಾಶಪಡಿಸಲು ನಡೆದ ಗುಂಪಿನ ಪ್ರಯತ್ನ ಸಮಿತಿಯ ಗಮನಕ್ಕೆ ಬಂದು ಮನವರಿಕೆಯಾಯಿತು. ನಂತರದಲ್ಲಿ ಸಮಿತಿಯು ಪರಿಶಿಷ್ಠ ಜಾತಿಯ ಕಾಲನಿಯಲ್ಲಿ ವಿವರವಾದ ಮಾಹಿತಿಯನ್ನು ಸಂಗ್ರಹಿಸಿತು. ಹಾಗು ಕಾಲನಿಯಲ್ಲಿ ನೂರೈವತ್ತಕ್ಕೂ ಹೆಚ್ಚು ಸಂಪೂರ್ಣ ಭಸ್ಮವಾದ, ಜಖಂಗೊಂಡ, ಗುಡಿಸಲು, ಮನೆಗಳನ್ನು ಖುದ್ದು ಪರಿಶೀಲಿಸಿತು. ದಾಳಿಯ ವೇಳೆ ಹಾಜರಿದ್ದ ಪ್ರತ್ಯಕ್ಷ ದರ್ಶಿಗಳ ಅನುಭವಗಳನ್ನು ಆಲಿಸಿತು. ನಂತರದಲ್ಲಿ ಪರಿಶಿಷ್ಠ ಪಂಗಡದದ ಕಾಲನಿಗಳಿಗೆ ಭೇಟಿ ನೀಡಿ ಅಲ್ಲಿನ ಮುಂದಾಳುಗಳು, ಸಾರ್ವಜನಿಕರಿಂದಲೂ ಮಾಹಿತಿ ಸಂಗ್ರಹಿಸಿತು. ಇದಲ್ಲದೆ ಕ್ಷೇತ್ರದ ಶಾಸಕಿ ಗುಜ್ಜಲ ಜಯಲಕ್ಷ್ಮಿ ಹಾಗು ಜಾಗೃತ ನಾಯಕ ಬಳಗದ ಪದಾದಿಕಾರಿಗಳೊಂದಿಗೆ ವಿವರವಾಗಿ ಚರ್ಚಿಸಿ ಮಾಹಿತಿ ಸಂಗ್ರಹಿಸಿತು.

## ಸಮಿತಿಯ ತೀರ್ಮಾನಗಳು

1. ಮೇಲು ನೋಟಕ್ಕೆ ಪರಿಶಿಷ್ಠ ಪಂಗಡದ ಯುವತಿಯೊಬ್ಬಳನ್ನು ಪರಿಶಿಷ್ಠ ಜಾತಿಯ ಯುವಕ ಕೀಟಲೆ ಮಾಡಿದ ಹಿನ್ನೆಲೆಯಲ್ಲಿ ಹುಡುಗಿಯ ಸಹೋದರನ ಮೇಲೆ ನಡೆದ ಹಲ್ಲೆಯು ಒಟ್ಟಾರೆ ಪ್ರಕರಣಕ್ಕೆ ಪ್ರಚೋದನೆಯಂತೆ ಕಂಡು ಬಂದರೂ ಇದಕ್ಕೆ ಹಿಂದೆ ನಡೆದಿದ್ದ ಸಾಮಾಜಿಕ ಸ್ವಾಸ್ಥ್ಯ ಕದಡುವಂತಹ ಹಲವು ಸನ್ನಿವೇಶಗಳು ಹಿನ್ನೆಲೆಯಲ್ಲಿವೆ.

2. ಇಂತಹ ಉದ್ವಿಗ್ನ ಸಾಮಾಜಿಕ ಪರಿಸ್ಥಿತಿಯ ಸೂಕ್ಷ್ಮಗಳನ್ನು ಅದರೆಲ್ಲ ಆಯಾಮಗಳೊಂದಿಗೆ ಅರ್ಥಮಾಡಿಕೊಳ್ಳಲಾಗದ ಕಾನೂನು ಪಾಲಕರು ಮುಂಜಾಗೃತೆ, ದೂರಾಲೋಚನೆ ಇಲ್ಲದೆ ತಮ್ಮ ಮಾಮೂಲಿ ಯಾಂತ್ರಿಕ ಶೈಲಿಯಲ್ಲಿ ಪರಿಸ್ಥಿತಿಯನ್ನು ನಿಯಂತ್ರಿಸಲು ಮುಂದಾಗಿ ಪರಿಶಿಷ್ಠ ಜಾತಿಯ ಮೇಲೆ ನಡೆದ ದಾಳಿ ಮತ್ತು ಅಗ್ನಿ ಸ್ಪರ್ಶವನ್ನು ತಡೆಗಟ್ಟುವಲ್ಲಿ ವಿಫಲರಾಗಿದ್ದಾರೆ. ಅಷ್ಟೇ ಅಲ್ಲದೆ ಸುಳ್ಳು ವದಂತಿ ಮತ್ತು ಗಾಳಿ ಸುದ್ದಿಗಳು ಹಬ್ಬಲು ಕಾರಣ ಮತ್ತು ಅನಾಹುತಗಳಿಗೆ ಜವಾಬ್ದಾರರಾಗಿದ್ದಾರೆ.

3. ಸರ್ಕಾರ ಸಂತ್ರಸ್ಥರಿಗೆ ನೀಡುತ್ತಿರುವ ತಾತ್ಕಾಲಿಕ ಪರಿಹಾರ, ಅಸಮರ್ಪಕವಾಗಿದ್ದು ಅತೃಪ್ತಿ ಮತ್ತು ಅಸಮಾಧಾನಗಳಿಗೆ ಎಡೆ ಮಾಡಿಕೊಂಡಿದೆ.

4. ಪರಿಶಿಷ್ಟ ಜಾತಿಯ ಜನರು ತಮ್ಮ ಮನೆಗಳಿಗೆ ತಾವೇ ಬೆಂಕಿ ಹಾಕಿಕೊಂಡಿದ್ದಾರೆ ಎಂಬ ಪರಿಶಿಷ್ಠ ಪಂಗಡದ ಕೆಲವು ಮುಂದಾಳುಗಳು ದೂರುತ್ತಿರುವುದನ್ನು ಗಂಭೀರವಾಗಿ ಪರಿಗಣಿಸಿದ ಸಮಿತಿ ತನಿಖೆಯ ನಂತರ ಮನೆಗಳುಸುಟ್ಟಿರುವ ರೀತಿ, ದಾಳಿಯ ಸ್ವರೂಪಗಳ ಆಧಾರಗಳ ಮೇಲೆ ಇದು ಸತ್ಯಕ್ಕೆ ದೂರವಾದ ಆರೋಪ ಎಂದು ತೀರ್ಮಾನಿಸಿದೆ.

5. ಈ ಘಟನೆಗೆ ಅನೇಕ ಅಂಶಗಳು ಕಾರಣವಾಗಿದ್ದರೂ 1967 ರಿಂದ ಜೀವಂತವಾಗಿರುವ ಭೂ ಸಮಸ್ಯೆ -ಯೊಂದು ಬಹುಮುಖ್ಯ ಕಾರಣ ಎಂಬುದನ್ನು ಸಮಿತಿ ಗುರುತಿಸ ಬಯಸುತ್ತದೆ. 1967 ರಲ್ಲಿ ಪರಿಶಿಷ್ಠ ಜಾತಿಯವರಿಗೆ ಮಂಜೂರಾಗಿರುವ ಸುಮಾರು 150 ಎಕರೆ ತರಿ ಮತ್ತು ಖುಷ್ಕಿ ಭೂಮಿ ಈಗ ಇತರೆ ಜಾತಿಗಳ ಸ್ವಾಧೀನದಲ್ಲಿದ್ದು, ಇದನ್ನು ಹಿಂದಕ್ಕೆ ಪಡೆಯಲು ನಡೆಸುತ್ತಿರುವ ಪ್ರಯತ್ನವೂ ಸಾಮಾಜಿಕ ಒಳಗುದಿಗೆ ಕಾರಣವಾಗಿದೆ.

6. ದಲಿತ ಸಂಘಟನೆಗಳು ಹಾಗೂ ಇತರೆ ಜಾತಿ ಸಂಘಟನೆಗಳು ಈ ಘಟನೆಯ ಸೂಕ್ಷ್ಮತೆ ಮತ್ತು ವಾಸ್ತವಾಂಶಗಳನ್ನು ಕಡೆಗಣಿಸಿ ಬೇಜವಾಬ್ದಾರಿ

ಹೇಳಿಕೆಗಳ ಸಮರದಲ್ಲಿ ನಿರತರಾಗಿರುವುದು ಪರಿಶಿಷ್ಟ ಜಾತಿ ಮತ್ತು ಪಂಗಡಗಳ ನಡುವಿನ ಕಂದಕ ಹೆಚ್ಚಾಗಲು ಕಾರಣವಾಗುತ್ತಿದೆ. ಅಲ್ಲದೆ ಈ ಪರಿಸ್ಥಿತಿ ಹಾಗೇ ಮುಂದುವರೆದಲ್ಲಿ ಇದು ರಾಜ್ಯದ ಇನ್ನಿತರ ಭಾಗಗಳಿಗೂ ಹರಡುವ ಸಾಧ್ಯತೆಯನ್ನು ಸಮಿತಿ ಆತಂಕದಿಂದ ಗುರುತಿಸಬಯಸುತ್ತದೆ.

**ಸಮಿತಿಯ ಶಿಫಾರಸ್ಸುಗಳು ಮತ್ತು ಕರೆ.**

1. ಈ ಘಟನೆಗೆ ಪಾಲುದಾರರಾಗಿರುವ ಎರಡೂ ಗುಂಪಿನ ಎಲ್ಲ ಆರೋಪಿಗಳ ಮೇಲೆ ಕೂಡಲೇ ನಿಷ್ಪಕ್ಷಪಾತ ಕಾನೂನಿನ ಕಟ್ಟು ನಿಟ್ಟಿನ ಕ್ರಮ ಕೈಗೊಳ್ಳಬೇಕೆಂದು ಸಮಿತಿ ಆಗ್ರಹಿಸುತ್ತದೆ.

2. ಭಗ್ನಗೊಂಡಿರುವ ಡಾ|| ಬಾಬಾಸಾಹೇಬ್ ಅಂಬೇಡ್ಕರರ ಪ್ರತಿಮೆಯನ್ನು ಸರ್ಕಾರ ತಾನೇ ನಿರ್ಮಿಸುವ ಕಾರ್ಯವನ್ನು ಬದಿಗಿಟ್ಟು ಕಮಲಾಪುರದ ಎಲ್ಲ ನಾಗರೀಕರ ಕೊಡುಗೆಗಳ ಮೂಲಕ ಸರ್ವಜನರ ಪಾಲುದಾರಿಕೆಯಲ್ಲಿ ಪ್ರತಿಮೆ ಪುನರ್‌ಸ್ಥಾಪಿಸಲು ಮುಂದಾಗಬೇಕೆಂದು ಸಮಿತಿ ಕರೆಕೊಡುತ್ತದೆ.

3. ರಾಜ್ಯಾದ್ಯಂತ ಅದರಲ್ಲೂ ಮುಖ್ಯವಾಗಿ ಬಳ್ಳಾರಿ ಜಿಲ್ಲೆ. ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಭಾಗಗಳಲ್ಲಿ ತೀವ್ರವಾಗಿ ತಲೆಎತ್ತುತ್ತಿರುವ ಪರಿಶಿಷ್ಟ ಜಾತಿ ವಿರುದ್ಧದ ಸಾಮಾಜಿಕ ಅಸಹನೆಗೆ ದಲಿತ ಸಂಘಟನೆಗಳ ಬೇಜವಾಬ್ದಾರಿ ತನವೂ ಕಾರಣವಾಗುತ್ತಿರುವುದರಿಂದ ಕಮಲಾಪುರದ ಘಟನೆಯ ಹಿನ್ನೆಲೆಯಲ್ಲಿ ದಲಿತ ಸಂಘಟನೆಗಳು ಆತ್ಮಾವಲೋಕನ ಮಾಡಿಕೊಳ್ಳಲು ಮುಂದಾಗಬೇಕೆಂದು ಹಾಗೂ ಪರಿಶಿಷ್ಟ ಪಂಗಡಗಳು ಕಮಲಾಪುರ ಘಟನೆಯ ಮೂಲಕ ತಮಗೆ ದಕ್ಕಿರುವ ಸಂವಿಧಾನಕ ರಕ್ಷಣೆಗೆ ತಾವೇ ತಮ್ಮ ಕೈಯಾರೆ ಧಕ್ಕೆ ತಂದುಕೊಳ್ಳುತ್ತಿರುವುದುರಿಂದ ಈ ನಿಟ್ಟಿನಲ್ಲಿ ಇವರೂ ಆತ್ಮಾವಲೋಕನ ಮಾಡಿಕೊಳ್ಳಲು ಮುಂದಾಗಬೇಕೆಂದು ಸಮಿತಿ ಕರೆ ನೀಡುತ್ತದೆ.

4. ಮೂಲಭೂತವಾದದ ವಿರುದ್ಧ ದನಿ ಎತ್ತತೊಡಗಿರುವ ಪ್ರಗತಿಪರರು ಮೂಲಭೂತ-ವಾದದ ಮತ್ತೊಂದು ಮುಖವಾದ ಹೆಚ್ಚುತ್ತಿರುವ ಜಾತಿವಾದ ಗಂಭೀರವಾಗಿ ಪರಿಗಣಿಸಬೇಕೆಂದೂ ಹಾಗೂ ಕಮಲಾಪುರ ಘಟನೆಯನ್ನು ಕೇಂದ್ರವಾಗಿಟ್ಟುಕೊಂಡು ಈ ಬಗ್ಗೆ ಕಾರ್ಯಕ್ರಮ ರೂಪಿಸಬೇಕೆಂದು ಸಮಿತಿ ಕರೆ ನೀಡುತ್ತದೆ.

5. ಸರ್ಕಾರ ಹೆಚ್ಚುತ್ತಿರುವ ಜಾತಿ ಮತ್ತು ಸಾಮಾಜಿಕ ಉದ್ವಿಗ್ನತೆಯನ್ನು ಶಮನ ಮಾಡಲು ತನ್ನ ಸಾಂಪ್ರದಾಯಿಕ ಶೈಲಿ ಮಾದರಿಗಳ ಆಚೆಗೆ ಬೇರೆಯದೆ ಸೂಕ್ಷ್ಮತೆ, ಸಂವೇದನಾ ಶೀಲತೆ ಪ್ರದರ್ಶಿಸಬೇಕೆಂದು ಕರೆಕೊಡುತ್ತದೆ.

# ಕುಶಾಲನಗರದಲ್ಲಿ ಮಹಿಳಾ ದಿನಾಚರಣೆ

ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ಅಂಗವಾಗಿ ಜಾಗೃತಿ ಮಹಿಳಾ ವೇದಿಕೆಯು ಕುಶಾಲನಗರದಲ್ಲಿ " ಮಹಿಳೆ ಮತ್ತು ಸಾಮಾಜಿಕ ದೌರ್ಜನ್ಯ " ಎಂಬ ವಿಷಯದ ಮೇಲೆ ಸಂವಾದಗೋಷ್ಠಿಯನ್ನು ಏರ್ಪಡಿಸಿತ್ತು. ಮಡಿಕೇರಿಯ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜಿನ ಕನ್ನಡ ವಿಭಾಗದ ಉಪನ್ಯಾಸಕಿ ಎಲ್.ಲಕ್ಷ್ಮೀದೇವಿಯವರು ಈ ವಿಷಯದ ಬಗ್ಗೆ ಉಪನ್ಯಾಸ ನೀಡುತ್ತಾ ಹೆಣ್ಣನ್ನು, ಪ್ರಕೃತಿ ಭೂಮಿ, ನದಿ-ನೀರು, ದೇವತೆ ಎಂದೆಲ್ಲ ಸಂಕೇತಿಸುವ ಸಮಾಜ, ಅವಳನ್ನು ಸಹನೆಯ ಸಾಕಾರ ಮೂರ್ತಿಯಾಗಿಯೂ, ಗುಣವತಿ-ಶೀಲವತಿ-ಯಾಗಿಯೂ ಕಾಣಲು ಬಯಸುತ್ತದೆ. ಹೆಣ್ಣಿನ ಪಾವಿತ್ರ್ಯತೆಗೆ ಪ್ರಾಶಸ್ತ್ಯ ಕೊಡುವ ಕಾರಣಗಳಿಗಾಗಿ ಪುರಾಣಗಳ ಹಿನ್ನೆಲೆಯಲ್ಲಿ ಪೂಜ್ಯಸ್ಥಾನವನ್ನು ನೀಡಲಾಗಿದೆ. ಆದರೆ ಈ ಗೌರವ ಆದರದ ಹಿಂದೆ ತಾಳ್ಮೆ, ಶೀಲ, ತ್ಯಾಗ, ಮೃದು ಮತ್ತು ಕೋಮಲತ್ವಗಳ ಅಳತೆಗೋಲಿನಲ್ಲಿಯೇ ಹಿಡಿದಿಡುವ ತಂತ್ರ ಅಡಗಿದೆ.

ಒಂದು ಕಾಲದಲ್ಲಿ ಗಂಡು-ಹೆಣ್ಣೆಂಬ ಭೇದವಿಲ್ಲದೆ ಶ್ರಮ ಹಾಗೂ ಸಾಮಾಜಿಕ ಸ್ಥಾನಮಾನಗಳಲ್ಲಿ ಸಮಾನತೆ ಇತ್ತು. ದುಡಿಮೆಯ ಪ್ರತಿಫಲ ಯಾರಿಗೆ ಸಲ್ಲಬೇಕು ಅಥವಾ ತಾನು ಸಂಪಾದಿಸಿದ ಆಸ್ತಿ ಯಾರಿಗೆ ಸೇರಬೇಕು ಎಂಬ ಯೋಚನೆ ಎದುರಾದಾಗ ಗಂಡು ಹೆಣ್ಣನ್ನು ನಿಯಂತ್ರಿಸತೊಡಗಿದ. ತನ್ನೊಬ್ಬನ ಸಂತಾನವನ್ನೇ ಹೆರುವ ಖಾಸಗಿ ಆಸ್ತಿಯಾಗಿ ಹೆಣ್ಣನ್ನು ಹೆಂಡತಿಯಾಗಿ ಮಾಡಿಕೊಂಡ. ಅಂದಿನಿಂದ ನಿರ್ಬಂಧಗಳ ಕೋಟೆಯಲ್ಲಿ ಹೆಣ್ಣು ಕೊಳೆಯ ಬೇಕಾಯಿತು.

ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಬರೀ ಭಾಷಣಕ್ಕೆ ಸೀಮಿತವಾಗಿರಿಸದೆ ಬೇರೆ ಬೇರೆ ಚಟುವಟಿಕೆಗಳಲ್ಲಿ ಕೂಡಾ ಮಹಿಳೆಯರು ಭಾಗವಹಿಸುವಂತೆ ಮಾಡುವ ಉದ್ದೇಶದಿಂದ ಮತ್ತು ಮನೆ, ಮಕ್ಕಳು, ಕೆಲಸ, ಗಂಡ ಸಂಸಾರ ಎಂಬ ಜಂಜಾಟದಿಂದ ಹೊರಗೆ ಬಂದು ಒಂದು ದಿನವಾದರೂ ಹಾಡಿ, ಆಡಿ ಕುಣಿದು ನಮಗಾಗಿಯೇ ಇರುವ ದಿನದ ಮಹತ್ವವನ್ನು ಮಹಿಳೆಯರು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ವೇದಿಕೆಯ ಸದಸ್ಯರಿಗಾಗಿ ಫೆಬ್ರವರಿ 23 ರಂದು ಭಾನುವಾರ ಇಡೀ ದಿನ ಮಹಿಳಾ ದಿನಾಚರಣೆಯ ಪ್ರಯುಕ್ತ ವಿವಿಧ ರೀತಿಯ ಆಟೋಟ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಮಹಿಳೆಯರು ಈ ಕಾರ್ಯಕ್ರಮದಲ್ಲಿ ಅತೀ ಉತ್ಸಾಹದಿಂದ ಭಾಗವಹಿಸಿದ್ದು ವಿಶೇಷವಾಗಿತ್ತು.

ಸ್ಪರ್ಧೆಯಲ್ಲಿ ಒಟ್ಟು ಆರು ವಿಧದ ಆಟಗಳಿದ್ದು ಸುಮಾರು 60 ಜನ ಮಹಿಳೆಯರು ಭಾಗವಹಿಸಿದ್ದರು.

ಪುರುಷನ ಪ್ರಗತಿಗೆ ಬೆಂಬಲವಾಗಿ ಸಹಕರಿಸುತ್ತಾ, ತೆರೆಮರೆಯ ಬೊಂಬೆಯಂತೆ ಅದೃಶ್ಯ ಶಕ್ತಿಯಾಗಿ ಪ್ರೋತ್ಸಾಹಿಸುತ್ತಾ, ಮನೆತನದ ಮರ್ಯಾದೆಗಾಗಿ ಶ್ರಮಿಸುತ್ತಾ ಸಾರ್ಥಕತೆಯ ಸಮಾಧಾನವನ್ನು ಪಡಬೇಕಾಯಿತು. ದುಡಿಮೆಗೆ ತಕ್ಕ ಪ್ರಾಶಸ್ತ್ಯ ದೊರೆಯದೆ ಅದು ಅಗಣ್ಯವೆನಿಸಿದಾಗ ಅಲಕ್ಷ್ಯ ಕಂಡುಬಂದಾಗ ಅವಳಲ್ಲಿ ಸಹಜವಾಗಿಯೇ ಕೀಳರಿಮೆಯುಂಟಾಗಿ ಇತಿಮಿತಿಗಳಲ್ಲಿ ಬದುಕುವಂತಾಯಿತು.

ಆಧುನಿಕ ಯುಗದಲ್ಲಿ ಸ್ತ್ರೀ ಶೋಷಣೆ ಹಿಂದೆಂದಿಗಿಂತಲೂ ಹೆಚ್ಚಾಗಿದೆ. ಇದು ಶೋಚನೀಯ ಸಂಗತಿ. ಮೂರು ತಿಂಗಳ ಮಗುವಿನಿಂದ ಸಾಯುವ ಮುದುಕಿಯವರೆಗೂ ಲೈಂಗಿಕ ಅತ್ಯಾಚಾರಗಳು ಹೆಣ್ಣಿನ ಪಾಲಿಗೆ ಶಾಪದ ಸರಮಾಲೆಗಳಾಗಿರುವುದನ್ನು ನಾವು ಗಮನಿಸುತ್ತಲೇ ಇದ್ದೇವೆ.

ಉದ್ಯೋಗಸ್ಥ ಮಹಿಳೆ ಕೌಟುಂಬಿಕ ಹೊಂದಾಣಿಕೆಯೊಂದಿಗೆ ದುಡಿಯುವ ಪರಿಸರದ ಶೋಷಣೆ, ಹಲ್ಲೆ, ಅತ್ಯಾಚಾರಗಳನ್ನು ಎದುರಿಸಬೇಕಾಗಿದೆ. ವ್ಯವಸ್ಥೆಯಲ್ಲಿ ಸ್ವಲ್ಪ ಬದಲಾವಣೆಗಳಾದರೂ ಹೆಣ್ಣಿನ ಅವಸ್ಥೆ ಮಾತ್ರ ತಟಸ್ಥವಾಗಿಯೇ ಇದೆ. ಆರ್ಥಿಕ ಮತ್ತು ಸಾಮಾಜಿಕ ವಲಯಗಳ ಕಪಿಮುಷ್ಠಿಯಿಂದ ಹೆಣ್ಣು ಪಾರಾಗಬೇಕಾಗಿದೆ. ಆರ್ಥಿಕತೆಯ ಹಿಡಿತ ಪುರುಷವರ್ಗದ ಕೈಯಲ್ಲಿರುವ ತನಕ ಮಹಿಳೆ ಸ್ವಾವಲಂಬಿಯಾಗುವುದಿಲ್ಲ ಎಂದ ಲಕ್ಷ್ಮೀಯವರು ಗಳಿಸುವ ಮತ್ತು ವ್ಯಯಿಸುವ ಸ್ವಾತಂತ್ರ್ಯ ಹೊಂದುವುದೇ ಮಹಿಳಾ ಚಳವಳಿಯ ಗುರಿಯಾಗಬೇಕು ಎಂದರು.

ಮುಖ್ಯ ಅತಿಥಿಯಾಗಿದ್ದ ಕೊಡಗು ಜಿಲ್ಲಾ ಪಂಚಾಯತ್‌ನ ಮಾಜಿ ಅಧ್ಯಕ್ಷೆ ಸಕೆ.ಸಿ. ಚಂದ್ರಕಲಾ ಮಾತನಾಡಿ ಮಹಿಳೆಯರಿಗೆ ಇಂದು ಸರಿಯಾದ ನ್ಯಾಯ ಸಿಗುತ್ತಿಲ್ಲ. ಹೆಣ್ಣು ಮಕ್ಕಳು ಸಮಾಜದಲ್ಲಿನ ಸಮಸ್ಯೆ ಎದುರಿಸಲು ದಿಟ್ಟ ಹೆಜ್ಜೆ ಹಾಕಬೇಕು ಎಂದರು. ಇನ್ನೊಬ್ಬ ಅತಿಥಿ ವಿ.ಪಿ. ಶಶಿಧರ್ ಮಾತನಾಡಿ ಇಂತಹ ಮಹಿಳಾ ಸಂಘಟನೆಗಳು ಸಮಾಜದಲ್ಲಿನ ನೊಂದವರ ಪರವಾಗಿ ನಿಂತು ಶಕ್ತಿ ನೀಡುತ್ತಿರಬೇಕು. ಮಹಿಳೆಯರ ಬಗ್ಗೆ ಚಿಂತಿಸುವ ಹಾಗೂ ಜಾಗೃತಿ ಮೂಡಿಸುವ ಕಾರ್ಯಕ್ರಮಗಳು ಹೆಚ್ಚು ಹೆಚ್ಚಾಗಿ ನಡೆಯಬೇಕು ಎಂದರು.

ಸಮಾಜದಲ್ಲಿ ಮಹಿಳೆಯ ಶೋಷಣೆ ಅಂತ್ಯಗೊಳ್ಳಲು ಯಾವುದೇ ಮಹಿಳೆಯ ಹಿಂದೆ ಸಮಾಜದ ನೆರವು ಅಗತ್ಯ ಎಂದು ಜಿ.ಪಂ. ಮಾಜಿ ಉಪಾಧ್ಯಕ್ಷೆ ಕಮಲ ಗಣಪತಿ ಹೇಳಿದರು.

ಜಿಲ್ಲಾ ಪಂಚಾಯತಿ ಸದಸ್ಯೆ ಗಂಗಮ್ಮ ಪೂಣಚ್ಚ, ತಾಲೂಕು ಪಂಚಾಯಿತಿ ಸದಸ್ಯೆ ಜರೀನಾ ನಿಸ್ಸಾರ್ ಅಹಮ್ಮದ್, ಹೆಬ್ಬಾಲೆ ಗ್ರಾ. ಪಂಚಾಯಿತಿ ಅಧ್ಯಕ್ಷರಾದ ರಾಣಿ ವೆಂಕಟೇಶ್ ತೊರೆನೂರು ಸಹಕಾರ ಬ್ಯಾಂಕಿನ ಅಧ್ಯಕ್ಷೆ ಸೌಭಾಗ್ಯ, ಬೊಳ್ಳಮ್ಮ ವೇದಿಕೆಯಲ್ಲಿದ್ದರು. ತಾಹಿರಾ ಖಾಸಿಂ ಸ್ವಾಗತಿಸಿದರು, ಕುಮಾರಿ ರೇಷ್ಮಾ ವಂದಿಸಿದರು. ರೇಣುಕಾ ಕಾರ್ಯಕ್ರಮ ನಿರೂಪಿಸಿದರು.

- ಜಯಶ್ರೀ

ಕುಶಾಲನಗರ

ಮಾನಸದ ಪ್ರಕಟಣೆ ಮಾನಸದ ಓದುಗರ ಆರ್ಥಿಕ ನೆರವನ್ನು ಅವಲಂಬಿಸಿದೆ. ಓದುಗರು ಚಂದಾ ನವೀಕರಣದ ಸೂಚನೆ ಬಂದ ಕೂಡಲೇ ಚಂದಾ ನವೀಕರಿಸಿ ಸಹಕರಿಸಬೇಕೆಂದು ಕೋರುತ್ತೇವೆ.

ಸಂ. ಮಂಡಳಿ

# ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆ

ಬೆಂಗಳೂರು.

ಮಾನಸದ ದು.ಸರಸ್ವತಿಯವರು ಮಾತನಾಡುತ್ತಾ. ಕೋಮುವಾದವೆಂದರೆ ಕೇವಲ ಹಿಂದೂ ಇಸ್ಲಾಂ ಧರ್ಮದ ಹಿನ್ನಲೆಯಲ್ಲಿ ನೋಡದೆ ಹಿಂದೂ ಧರ್ಮದ ಒಳಗಡೆ ಇರುವ ಜಾತಿ ಆಧಾರಿತ ಶ್ರೇಣೀಕರಣವನ್ನು ಪ್ರಶ್ನಿಸ ಬೇಕೆಂದರು. ಜಾಜರ್‌ನ ಘಟನೆಯನ್ನೂ ಕುರಿತು ಪ್ರಸ್ತಾಪಿಸುತ್ತಾ ದನದ ಚರ್ಮ ಸುಲಿದರೆಂದು ದಲಿತರನ್ನು ಹಿಂಸಿಸುವ ಜನ ದನದ ಚರ್ಮದಿಂದ ಮಾಡಿದ ಚಪ್ಪಲಿಯನ್ನು ಹಾಕಿಕೊಳ್ಳುವುದಿಲ್ಲವೆ? ಎಂದು ಪ್ರಶ್ನಿಸಿದರು.

ಪೌರಕಾರ್ಮಿಕರಾದ ಜಯಮ್ಮ ಮಾತನಾಡುತ್ತಾ ದಲಿತ ಕುಟುಂಬದಿಂದ ಬಂದ ತಾನು, ಮುಸ್ಲಿಂ ಕುಟುಂಬದಲ್ಲಿ ಬೆಳೆದದ್ದನ್ನೂ ವಿವರಿಸುತ್ತಾ ಅವರು ಹೇಗೆ ನನ್ನನ್ನು ಸಮಾನತೆಯಿಂದ ನೋಡಿಕೊಂಡರೆಂದು ಹೇಳಿದರು ಆದರೆ, ಹಿಂದೂ ಧರ್ಮದಲ್ಲಿನ ಮೇಲು ಜಾತಿಯ ಜನರು ತನ್ನನ್ನು ಸಮಾನತೆಯಿಂದ ನೋಡಿಕೊಳ್ಳದೇ ಕೀಳಾಗಿ ನಡೆಸಿಕೊಳ್ಳುತ್ತಿದ್ದರೆಂದು ತಿಳಿಸಿದರು ಕೋಮು ಸಾಮರಸ್ಯ ಕುರಿತು ಹಾಡುಗಳನ್ನೂ ಹೇಳಲಾಯಿತು.

ದಿನಾಂಕ 1, ಹಾಗೂ 6 ವಿಮೆನ್ಸ್ ವಾಯ್ಸ ರವರು ಕೋಮುವಾದವನ್ನು ಕುರಿತು ಚರ್ಚೆ, ವಿಚಾರ ಸಂಕಿರಣವನ್ನೂ ಏರ್ಪಡಿಸಿದ್ದರು. ಸಂಚೆ ಮಾನವ ಸರಪಳಿಯನ್ನೂ ನಿರ್ಮಿಸುವುದರ ಮೂಲಕ ಶಾಂತಿ ಸಂದೇಶವನ್ನು ಸಾರಲಾಯಿತು. ಇದೇ ದಿನ ಸಾಯಂಕಾಲ ಪೆಡಿನಾ ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸಿತ್ತು.

ದಿನಾಂಕ 2 ರಂದು ಗಾರ್ಮೆಂಟ್ಸ್ ನಲ್ಲಿ ದುಡಿಯುವ ಮಹಿಳೆಯರ ಮಕ್ಕಳಿಗೆ ವಿವಿಧ ಸ್ಪರ್ಧೆ, ಬಹುಮಾನ ವಿತರಣೆ, ಹಾಗೂ ಸರ್ವಜನಿಕ ಭಾಷಣವನ್ನೂ ಏರ್ಪಡಿಸಲಾಗಿತ್ತು.

ದಿನಾಂಕ 3ರಂದು ಸಿ.ಡಬ್ಲ್ಯೂ.ಸಿ. ಹಾಗೂ ಅಲ್‌ಹುದಾ ಪರವಾಗಿ ಸಾರ್ವಜನಿಕ ಸಭೆಯನ್ನು ಏರ್ಪಡಿಸಲಾಗಿತ್ತು. ಕೋಮುಸೌಹಾರ್ದತೆಯನ್ನು ಎತ್ತಿ ಹಿಡಿಯುವ ಬೀದಿ ನಾಟಕದೊಂದಿಗೆ ಮೌನ ಪ್ರತಿಭಟನೆಯನ್ನು ನಡೆಸಲಾಯಿತು. ದಿನಾಂಕ 4ರಂದು ವೈ.ಎಮ್.ಸಿ.ಯೇ ಮೌನ ಪ್ರತಿಭಟನೆ : ದಿನಾಂಕ 7 ರಂದು ಯು.ಬಿ.ಸಿ. ಎಸ್.ಸಿ.ಎಮ್, ಮೀನಾ, ಇ.ಸಿ.ಸಿ ನ್ಯಾಶನಲ್ ಕೌನ್ಸಿಲ್ ಆಫ್ ಚರ್ಚ್‌ಸ್ ಹಾಗೂ ಐ.ಎಸ್.ಪಿ ನವರು ಸಂಯುಕ್ತವಾಗಿ ಕಾರ್ಯಕ್ರಮವನ್ನು ಏರ್ಪಡಿಸಿದ್ದು ಈ ಕಾರ್ಯಕ್ರಮದಲ್ಲಿ ಸಂಜೆಯ ಬಿಸ್ವಾಸ್ ರವರು ಮಾತನಾಡಿದರು.

ಅದೇ ದಿನ ಸಂಜೆ, ಸಿ.ಡಬ್ಲ್ಯೂ.ಸಿ. ಸಂಘಟನೆಯು ಪ್ರತಿಭಟನಾ ಮೆರವಣಿಗೆ, ಸಭೆ ನಡೆಸಿ ಹಾಗೂ ಯಕ್ಷಗಾನದ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆಯ ಪ್ರಯುಕ್ತ ವಿವಿದ ಮಹಿಳಾ ಸಂಘಟನೆಗಳು ಹಾಗೂ ಇತರ ಪ್ರಗತಿಪರ ಸಂಘಟನೆಗಳು, ಸ್ವಯಂ ಸೇವಾ ಸಂಸ್ಥೆಗಳು ಮಹಿಳಾ ಒಕ್ಕೂಟವನ್ನೂ ರಚಿಸಿಕೊಳ್ಳಲಾಗಿತ್ತು. ಭಾರತದ ಪ್ರಸ್ತುತ ಸಮಸ್ಯೆಯಾದ ಕೋಮುವಾದವನ್ನು ವಿರೋಧಿಸುವುದ -ರೊಂದಿಗೆ ಕೋಮು ಸೌಹಾರ್ದತೆಯನ್ನು, ಸಹಬಾಳ್ವೆಯನ್ನು ಕೇಂದ್ರಿಕರಿಸಿ ಒಂದು ವಾರದ ವರೆಗೆ ವಿವಿಧ ಸಂಘಟನೆಗಳು ವಿವಿಧ ರೀತಿಯ ಕಾರ್ಯಕ್ರಮವನ್ನೂ ಹಮ್ಮಿಕೊಂಡಿದ್ದವು. ಗುಜರಾತ್ ಹಿಂಸಾಕಾಂಡದ ನೆನಪಿನಿಂದ ಫೆಬ್ರವರಿ 28 ರಿಂದ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ವಿಮೋಚನಾ ಮಹಿಳಾ ಹಕ್ಕುಗಳ ವೇದಿಕೆ ಜಯನಗರದ ನಾಲ್ಕನೆ ಬ್ಲಾಕ್‌ನಲ್ಲಿ ಸಂಘಟಿಸಿದ ಕಾರ್ಯಕ್ರಮದಲ್ಲಿ ಕಪ್ಪು ಬಟ್ಟೆಯನ್ನು ಧರಿಸಿ, ಮೌನವಾಗಿ ಪ್ರತಿಭಟನೆಯನ್ನು ನಡೆಸಲಾಯಿತು. ಮೌನ ಪ್ರತಿಭಟನೆಯ ನಂತರ ಕೇರಳಾದ ಶಾಕ್ ಟ್ರೂಪ್ ನವರಿಂದ ಕೋಮುವಾದ ಕುರಿತ ಭಯಂ ಎಂಬ ಬೀದಿನಾಟಕವನ್ನೂ ಪ್ರದರ್ಶಿಸಲಾಯಿತು. ಕಾರ್ಯಕ್ರಮದ ಕೊನೆಯಲ್ಲಿ ಅರುಂಧತಿ ನಾಗ್‌ರವರು ಮಾತನಾಡುತ್ತ, ಯುದ್ಧ ಭೀತಿ ಹೇಗೆ ನಮ್ಮೆಲ್ಲರ ದೈನಂದಿನ ಜೀವನದ ಮೇಲೆ ಪರಿಣಾಮವನ್ನೂ ಬೀರುತ್ತದೆ, ಹಾಗೂ ಕೋಮುವಾದವನ್ನೂ ಎದುರಿಸುವ ಅಗತ್ಯವನ್ನು ಕುರಿತು ಸಭೆಯನ್ನು ಉದ್ದೇಶಿಸಿ ಮಾತನಾಡಿದರು.

ಮಾರ್ಚ್ ಐದರಂದು ಮಾನಸ ಮಹಿಳಾ ಹಕ್ಕುಗಳ ವೇದಿಕೆಯು ಕೋಮು ಸೌಹಾರ್ದತೆ ಕುರಿತು ಏರ್ಪಡಿಸಿದ ಕಾರ್ಯಕ್ರಮದಲ್ಲಿ ತಸ್ಲೀಮ್ ರವರು ಇಸ್ಮತ್ ಚುಗ್ತಾಯಿಯವರ ಬರಹದಲ್ಲಿರುವ ಪ್ರಾಮಾಣಿಕತೆ, ಜೀವನ ಪ್ರೇಮ ಹಾಗೂ ಇಸ್ಮತ್ ಹೇಗೆ ಇಂದಿಗೂ ಪ್ರಸ್ತುತಳಾಗುತ್ತಾಳೆಂದು ಮಾತನಾಡಿದರು ಅಗ್ರಹಾರ ಕೃಷ್ಣಮೂರ್ತಿಯವರು ಸೂಫಿ ತತ್ವಗಳನ್ನು ಕುರಿತು ಮಾತನಾಡುತ್ತಾ, ಸೂಫಿಯ ಆಲೋಚನಾ ಕ್ರಮದಲ್ಲಿಯೇ ಕೋಮುಸಾಮರಸ್ಯದ ಅಂಶಗಳು, ಹಾಗೂ ಜೀವನ ಪರ ಧೋರಣೆ ಅಂತರ್ಗತವಾಗಿರುವುದರಿಂದ ಸೂಫಿ ಪಂಥ ಪ್ರಸ್ತುತ ಸಾಮಾಜಿಕ ಜೀವನದಲ್ಲಿ ಹೇಗೆ ಮುಖ್ಯವಾಗುತ್ತದೆಯೆಂದು ವಿವರಿಸಿದರು.

ಅಂತರ ಧರ್ಮೀಯ ವಿವಾಹವಾದ ಸತ್ಯ ಬದುಕಿನ ಅನುಭವಗಳನ್ನು ಹಂಚಿಕೊಳ್ಳುತ್ತಾ, ಮನುಷ್ಯರೆಲ್ಲರೂ ಒಂದೇ, ಪ್ರತಿಯೊಂದು ಧರ್ಮಕ್ಕೆ ಸಲ್ಲಬೇಕಾದ ಗೌರವವನ್ನು ನಾವು ಕೊಡಲೇ ಬೇಕೆಂದು ಹೇಳಿದರು ಖಾಸೀಂ ರವರು ಮಾತನಾಡುತ್ತಾ, ಅಲ್ಪಸಂಖ್ಯಾತ ಕುಟುಂಬದಿಂದ ತಾವು ಬಂದಿದ್ದರೂ ತಾವು ಯಾವುದೇ ಧರ್ಮದ ಮೂಲಭೂತ ವಾದದಿಂದ ದೂರವಿದ್ದು ಮನುಷ್ಯ ಪರ ಧೋರಣೆಗಳಿಗಾಗಿ ತಾವು ತುಡಿಯುವುದನ್ನು ವಿಶ್ಲೇಸಿದರು.

ದಿನಾಂಕ 8 ಅಂತರ ರಾಷ್ಟ್ರೀಯ ದಿನದಂದು ಕೋಮುಸೌಹಾರ್ದತೆಗಾಗಿ ಮಹಿಳೆಯರ ಬೃಹತ್ ಮೆರವಣಿಗೆಯನ್ನು ನಡೆಸಲಾಯಿತು. ಹಾಡುಗಳನ್ನು ಹೇಳುತ್ತಾ, ಮಹಿಳೆಯರು ಮಕ್ಕಳ ಕೂಟದಿಂದ ಬಸವನ ಗುಡಿ ನ್ಯಾಶ್‌ನಲ್ ಕಾಲೇಜು ಆವರಣದಲ್ಲಿ ಸೇರಿದರು ಸಭೆಯನ್ನು ಉದ್ದೇಶಿಸಿ, ಶ್ರೀಮತಿ ಭಾನು ಮುಶ್ತಾಕರವರು ಮಾತನಾಡುತ್ತಾ ಕೋಮುವಾದಕ್ಕೂ ಹಾಗೂ ಯುದ್ಧಕ್ಕು ಹೇಗೆ ನೇರವಾದ ಸಂಬಂಧವಿದೆಯೆಂದು ವಿವರಿಸಿದರು. ಗುಜರಾತಿನಲ್ಲಿ ನಡೆದ ಕೋಮು ಹಿಂಸೆಯಲ್ಲಿ ಮಹಿಳೆಯರು ಭಾಗವಹಿಸಿದ ಸಂಗತಿಯು ಮಹಿಳೆಯರಲ್ಲಿ ಉಂಟಾಗುತ್ತಿರುವ ದ್ರುವೀಕರಣವನ್ನು ಎತ್ತಿ ತೋರಿಸುತ್ತದೆ ಯೆಂದರು. ಈ ಹಿಂಸೆಯ ವಿರುದ್ಧ ಕೇವಲ ಮಹಿಳಾ ಸಂಘಟನೆಗಳು ಧ್ವನಿ ಎತ್ತಿರುವುದನ್ನೂ ಗುರುತಿಸಿದರು.

ಕಮ್ಯೂನಲ್ ಕಂಬ್ಯಾಟ್ ಪತ್ರಿಕೆಯ ಸುಪಾದಕಿಯಾದ ತೀಸ್ತಾ ರವರು ಮಾತನಾಡುತ್ತಾ, ಧರ್ಮ ಹಾಗೂ ರಾಜಕಾರಣವನ್ನು ಬೆರಸಬಾರದು, ಧರ್ಮ ಹಾಗೂ ರಾಜಕಾರಣವನ್ನು ಬೆರಸಿದ, ಅಫಘಾನಿಸ್ತಾನ, ಬಾಂಗ್ಲಾ, ಶ್ರೀಲಂಕಾ ಮುಂತಾದ ದೇಶಗಳು ಹೇಗೆ ಅವನತಿಯನ್ನು ಹೊಂದ ಬಹುದೆಂಬುದಕ್ಕೆ ನಿದರ್ಶನಗಳಾಗಿದೆ, ಹಿಂದುತ್ವ ಬೇರೆ, ಧರ್ಮಬೇರೆ ಎನ್ನುತ್ತಾ, ಮಹಿಳೆಯರ ಮುಂದೆ ಎರಡು ಬಹುಮುಖ್ಯವಾದ ಸವಾಲುಗಳಿವೆ. ಸಂಪ್ರದಾಯಗಳು, ಪದ್ಧತಿಗಳು, ಸ್ತ್ರೀಯರನ್ನು ಉಸಿರುಗಟ್ಟಿಸುತ್ತವೆ. ಬೇರೆ ಯಾವುದೇ ಧರ್ಮದ ಮೂಲಭೂತವಾದವನ್ನು ಮಹಿಳೆಯರು ವಿರೋಧಿಸಲೇ ಬೇಕು ಎಂದು ನುಡಿದರು.

ವಿವಿದ ಸಂಘಟನೆಗಳು ಹಾಡು, ಕವನವಾಚನ, ನಾಟಕ ಯಕ್ಷಗಾನ, ಮುಂತಾದ ಕಾರ್ಯಕ್ರಮಗಳನ್ನೂ ನಡೆಸಿ ಕೊಟ್ಟರು.

**ಅಂತರ ರಾಷ್ಟ್ರೀಯ ಮಹಿಳಾದಿನಾಚರಣೆಯ ಅಂಗವಾಗಿ ಹೊರತಂದ ಬೆಂಗಳೂರಿನ ಮಹಿಳಾ ಒಕ್ಕೂಟದ ಕರಪತ್ರವನ್ನು ಮಾನಸ ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ.**

## ಯುದ್ಧ ಹಾಗೂ ಹಿಂಸೆಯ ವಿರುದ್ಧ ಶಾಂತಿ ಮತ್ತು ಸೌಹಾರ್ದತೆಗಾಗಿ ಒಂದು ಮುಕ್ತ ಮನವಿ

**ಮಾರ್ಚ್ 8, ಅಂತರಾಷ್ಟ್ರೀಯ ಮಹಿಳಾ ದಿನ**

*ನಮ್ಮ ಕಾಲಬದುಕುಗಳನ್ನೆಲ್ಲ ಆಕ್ರಮಿಸಿಕೊಂಡಿರುವ ಅಸಹನೆ ಹಾಗೂ ಹಿಂಸಾ ಸಂಸ್ಕೃತಿಯ ವಿರುದ್ಧ ಅಸಹನೆಯಿಂದ ಸಿಡಿದೆದ್ದು ಶಾಂತಿ ಸೌಹಾರ್ದತೆಗಳಿಗಾಗಿ ಹಾತೊರೆಯುತ್ತಿರುವ ಪ್ರತಿಯೊಬ್ಬರಿಗೂ ಈ ಪತ್ರ ಅರ್ಪಿತ.*

*ಇಂದು ಸರ್ವಾಧಿಕಾರಿ ಪ್ರವೃತ್ತಿಯ ಅಮೇರಿಕವು ಇರಾಕ್‌ನ ಮೇಲೆ ಯುದ್ಧ ಸಾರುವ ಬೆದರಿಕೆ ಒಡ್ಡುವುದರ ಜೊತೆಗೆ ತಾನು ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕವಾಗಿ ಜಾಗತಿಕ ಸರ್ವಾಧಿಕಾರಿಯಂತೆ ವರ್ತಿಸುತ್ತಿರುವ ನೀತಿಯನ್ನು ಪ್ರಶ್ನಿಸುವ ಪ್ರತಿಯೊಬ್ಬರಿಗೂ ಬೆದರಿಕೆ ಒಡ್ಡುತ್ತಿರುವ ಮಾನವ ವಿರೋಧಿತನದಿಂದ ಜಗತ್ತು ಬೆಚ್ಚಿದೆ. ಅಲ್ಲದೆ ತನ್ನಪರ ಯಾರು, ವಿರೋಧಿಗಳಾರು ಎಂದು ವಿಂಗಡಿಸುತ್ತ ಇಡೀ ಜಗತ್ತನ್ನೇ ಇಬ್ಬಾಗ ಮಾಡುವ ಹುನ್ನಾರ ನಡೆಸುತ್ತಿರುವುದನ್ನು ನಾವೆಲ್ಲಾ ಅರಿತಿದ್ದೇವೆ ; ಗಮನಿಸುತ್ತಿದ್ದೇವೆ.*

*ಹಾಗೆಯೆ ಇತ್ತೀಚೆಗೆ ಗುಜರಾತಿನಲ್ಲಿ ಭುಗಿಲೆದ್ದ ಹಿಂಸಾಚಾರಗಳು ಅನಾದಿ ಕಾಲದಿಂದ ಮೆರೆದಿದ್ದ ಸೌಹಾರ್ದತೆಯನು ದ್ವಂಸ ಮಾಡಿ ನಾವು ಬಹು ಸಂಖ್ಯಾತರು ಅವರು ಅಲ್ಪ ಸಂಖ್ಯಾತರು ಎಂಬ ಅನುಮಾನ, ಅಸಡ್ಡೆ, ಅಹಂಕಾರದ ಅಡ್ಡ ಗೋಡೆ ಕಟ್ಟಲು ಯತ್ನಿಸುತ್ತಿರುವ ಮೂಲಭೂತವಾದಿಗಳ ಅತಿರೇಖದ ವರ್ತನೆಗೆ ಮೂಕ ಸಾಕ್ಷಿಯಾಗಿ ನಿಂತಿದ್ದೇವೆ.*

*ಕಾಲ ಕಳೆದಂತೆ ಭಾರತದ ವಿಭಜನೆಯ ಹಿಂಸಾಚಾರದ ನೆನಪಿನಂತೆ, ಕಾಶ್ಮೀರದ ಹಿಂಸಾಚಾರ, ಸಿಖ್ ವಿರೋಧಿ ಹಿಂಸಾಚಾರ, ಅಯೋಧ್ಯೆಯ ಹಿಂಸಾಚಾರದಂತೆ ಈ ಗುಜರಾತ್ ಹಿಂಸಾಚಾರವೂ ಇತಿಹಾಸದ ಪುಟ ಸೇರಿಕೊಂಡುಬಿಡುತ್ತದೆ. ಆದರೆ ಆ ಕಹಿ ಅನುಭವ / ನೆನಪುಗಳು ಮಾತ್ರ ಮಾಸುವುದಿಲ್ಲ; ವಾಸಿಯಾಗುವುದಿಲ್ಲ. ಯಾಕೆಂದರೆ ಗುಜರಾತಿನಲ್ಲಿ ನಡೆದ ಹಿಂಸಾಚಾರ ಸರ್ಕಾರ ಪ್ರೇರಿತವಾಗತ್ತು ; ಹಾಗೆಯೆ ಅಲ್ಲಿನ ಆರಕ್ಷಕರೂ ಅರಕ್ಷಕರಾಗಿ ವರ್ತಿಸಿ ಅಲ್ಪ ಸಂಖ್ಯಾತರ ಭೀತಿ ಇಮ್ಮಡಿಗೊಳಿಸಿದರು. ನೆರೆ ಮನೆಯ ಪರಿಚಿತ ಬಹು ಸಂಖ್ಯಾತರೆ ತಮ್ಮ ಪರಿಚಿತ ಅಲ್ಪ ಸಂಖ್ಯಾತ ಮಹಿಳೆಯರ ಮೇಲೆ ಅತ್ಯಾಚಾರಗೈದರೆ ಸಹಾಯಕ್ಕೆ ಬರುವವರಾರು ?*

ಯಾರದೋ ರಾಜಕೀಯ ತೆವಲಿಗೆ ಬಲಿಯಾಗುವ ಅಮಾಯಕರು ಒಂದು ಕಡೆಯಾದರೆ, ಇಂತಹ ಪರಿಸ್ಥಿತಿಗಳ ದುರ್ಲಾಭ ಪಡೆದು, ದ್ವೇಷ, ಲೂಟಿ, ಅತ್ಯಾಚಾರ, ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿ ಸಮಾಜಘಾತುಕ ಶಕ್ತಿಗಳನ್ನು ಬೆಂಬಲಿಸುವ ದುರಾತ್ಮರು ಇನ್ನೊಂದು ಕಡೆ. ಇಂತಹ ವಾತಾವರಣದಲ್ಲಿ ಮಹಿಳೆ - ಮಕ್ಕಳು, ಅಲ್ಪಸಂಖ್ಯಾತರು, ದಲಿತರು, ಆದಿವಾಸಿಗಳು ಸುರಕ್ಷದಿಂದ ಇರಲು ಸಾಧ್ಯವೇ ಇಲ್ಲ ಎಂಬಂತಹ ಪರಿಸ್ಥಿತಿ ದಿನೇ ದಿನೇ ಹೆಚ್ಚುತ್ತಿದೆ.

ಈ ವಿದ್ಯಾಮಾನದಿಂದಾಗಿ ನಾಗರೀಕ ಸಮಾಜ ತಲೆ ತಗ್ಗಿಸುವಂತಾಗಿದೆ. ಆದರೂ ಗುಜರಾತಿನಂತಹ ರಾಜ್ಯಗಳಲ್ಲಿ ಮಾತಾಂಧ ಪ್ರವೃತ್ತಿಯಿಂದಲೇ ಅಧಿಕಾರದ ಗದ್ದುಗೆ ಏರುವ ಅಸಹ್ಯ ಹಾದಿಯನ್ನು ಪ್ರೋತ್ಸಾಹಿಸಲಾಗಿದೆ. ಇದು 21ನೇ ಶತಮಾನದ ನಮ್ಮ ನಾಗರೀಕ ಸಮಾಜದ ಮತ್ತೊಂದು ವಿಪರ್ಯಾಸ.

ಸಾಲದ್ದಕ್ಕೆ ಗುಜರಾತಿನಂತಹ ರೀತಿಯಲ್ಲಿ ಯಶಸ್ವಿ ಕಂಡ ಮೂಲಭೂತವಾದಿ, ಪರಧರ್ಮ ದ್ವೇಷಿ ರಾಜಕಾರಣಿಗಳು ಇದೇ ರೀತಿಯ ವರಸೆಯನ್ನು ದೇಶದ ಉದ್ದಗಲಕ್ಕೂ ಬಳಸಿ ರಾಷ್ಟ್ರದ ಆಡಳಿತ ಚುಕ್ಕಾಣಿಯನ್ನು ಹಿಡಿಯುವ ಘೋಷಣೆ ಮಾಡಿರುವುದು ಪರಧರ್ಮ ಸಹಿಷ್ಣುಗಳಾದ ಎಲ್ಲಾ ಮಾನವತಾವಾದಿಗಳಿಗೂ ಸವಾಲಾಗಿ ನಿಂತಿದೆ. ಒಂದು ವೇಳೆ ಮುಂಬರುವ ದಿನಗಳಲ್ಲಿ ಮುಂಬರುವ ಚುನಾವಣೆಗಳಲ್ಲಿ 'ಹಿಂದುತ್ವ' ಬಂಡವಾಳವಾಗಿ ಬಿಟ್ಟರೆ ಮನುಷ್ಯತ್ವಕ್ಕೆ ಮರುಗುವ ನಮ್ಮ ನಿಮ್ಮೆಲ್ಲರ ಕಣ್ಣೀರು ಬತ್ತಿ ಹೋಗಿಬಿಡುತ್ತದೆ. ರಕ್ತಪಾತ ನಿತ್ಯ ದೃಶ್ಯವಾಗಿಬಿಡುತ್ತದೆ. ಬದುಕು ನರಕವಾಗಿ ಆತ್ಮಹತ್ಯೆಗಳೆ ಹೆಚ್ಚಾಗಬಹುದು.

ಜಾರ್ಜ್ ಬುಷ್, ನರೇಂದ್ರ ಮೋದಿ, ಒಸಮಾ ಬಿನ್ ಲಾಡೆನ್ ಮೂವರೂ ವಿನಾಶಪ್ರಿಯ ತ್ರಿಮೂರ್ತಿಗಳಾಗಿ ಬಿಟ್ಟದ್ದಾರೆ ವೈರಿಗಳನ್ನು ನಾಶ ಮಾಡುತ್ತೇವೆ ಎಂದು ಹೊರಟಿರುವ ಇವರೆಲ್ಲ ಅಂತಿಮವಾಗಿ ತಮ್ಮ ದೇಶಗಳ ನಾಶಕ್ಕೆ ನಾಂದಿ ಹಾಡುತ್ತಿದ್ದಾರೆ ಎಂಬ ಸತ್ಯವನ್ನು ಅವರಿನ್ನೂ ಅರ್ಥ ಮಾಡಿಕೊಂಡಂತೆ ಕಾಣುತ್ತಿಲ್ಲ, ಇವರ ಅವಿವೇಕಕ್ಕೆ ಅಮಾಯಕ ಪ್ರಜೆಗಳೆಲ್ಲ ಬೆಲೆ ತೆರಬೇಕಾಗಿದೆ. ಇದು ಅಕ್ಷಮ್ಯ - ಅನ್ಯಾಯ.

ಆದ್ದರಿಂದ ನಾವೆಲ್ಲ ಈ ಹಿಂಸಾ ವಿಷ ವರ್ತುಲವನ್ನು ಭೇದಿಸಲೇಬೇಕಾಗಿದೆ ; ಶಮನ ಮಾಡಲೇಬೇಕಾಗಿದೆ. ಏಕೆಂದರೆ ನಾವೆಲ್ಲ ಬದುಕನ್ನು ಮಾನವತೆಯನ್ನು ಪ್ರೀತಿಸುತ್ತೇವೆ. ಅಲ್ಲವೆ. ಬರೀ ಹಿಂಸಾಕಾಂಡವನ್ನು ಶಮನಪಡಿಸುವುದಷ್ಟೇ ಅಲ್ಲ ; ಧರ್ಮ - ಧರ್ಮಗಳ ನಡುವಿನ ದ್ವೇಷದ ಅಡ್ಡ ಗೋಡೆಗಳನ್ನು ಕೆಡವಬೇಕಾಗಿದೆ ; ಪರಸ್ಪರ ಹೊಂದಾಣಿಕೆ - ಸಹಬಾಳ್ವೆಯ ಬೆಸುಗೆ ಬೆಸೆಯಬೇಕಾಗಿದೆ. ಏಕೆಂದರೆ ಎಲ್ಲರೂ ಒಂದಾಗಿದ್ದರೆ ಎಂತಹ ಬಾಹ್ಯ ಸಂಕಷ್ಟಗಳನ್ನು ಧೈರ್ಯದಿಂದ ಎದುರಿಸಿ ನಿಲ್ಲಬಹುದು; ಜಯಿಸಬಹುದು ; ನಾಳಿನ ಭವಿಷ್ಯದ ಬಗ್ಗೆ ಕನಸುಗಳನ್ನು ಕಾಣಬಹುದು. ಏಕತೆಯಲ್ಲಿ ಅನೇಕತೆ ; ಅನೇಕತೆಯಲ್ಲಿ ಏಕತೆ ಕಾಣುವುದೇ ಸಮರಸ ಬದುಕಿನ ಬುನಾದಿ ಅಲ್ಲವೆ.

ಶಿರ್ಡಿ ಸಾಯಿಬಾಬಾ, ಬಾಬಾ ಬುಡನ್‌ಗಿರಿ, ವೇಲಾಂಗಣಿ, - ಹೀಗೆ ದೇಶದ ಉದ್ದಗಲಕ್ಕೂ ಹರಡಿಕೊಂಡಿರುವ ಸಕಲ ಧರ್ಮೀಯರ ನಂಬಿಕೆಗಳನ್ನು ಗಳಿಸಿಕೊಂಡು ಸಕಲರಿಗೂ ಪವಿತ್ರವೆನಿಸಿರುವ ಧರ್ಮ ಕೇಂದ್ರಗಳನ್ನು ಪಟ್ಟಭದ್ರ ಹಿತಾಶಕ್ತಿಗಳು ತಮ್ಮ ಸ್ವಾರ್ಥಕ್ಕಾಗಿ ರಾಜಕೀಯ ಕೇಂದ್ರಗಳನ್ನಾಗಿ ಮಾಡಲು ಯತ್ನಿಸುವ ಕುತಂತ್ರಗಳನ್ನು ಮೆಟ್ಟಿ ನಿಲ್ಲಬೇಕಾಗಿದೆ. ಅದು ಮುಸ್ಲಿಂ ಮೂಲಭೂತ ವಾದಿತ್ವವಾಗಿರಲಿ ; ಹಿಂದುತ್ವದ್ದಾಗಿರಲಿ ; ಕ್ರಿಶ್ಚಿಯನ್ ವಾದಿತ್ವದ್ದಾಗಿರಲಿ ; ಮತ್ಯಾವುದೇ ಆಗಿರಲಿ ಪ್ರತ್ಯೇಕತಾ ವಾದಿತ್ವಗಳೆಲ್ಲವನ್ನೂ ನಾವು ಖಂಡಿಸಬೇಕಾಗಿದೆ ; ವಿರೋಧಿಸಬೇಕಾಗಿದೆ. ಇದು ನಮ್ಮ ನಾಗರೀಕತೆಯ ಪರಂಪರೆಯಾಗಬೇಕಾಗಿದೆ.

ಅಕ್ಕಮಹಾದೇವಿ, ಬಸವಣ್ಣ, ಇಸ್ಮಾತ್ ಚುಗ್ತಾಯಿ, ಕಬೀರ್‌ದಾಸ್, ರಹೀಮ್, ಗಾಂಧೀಜಿ, ಗ್ಲಾಡೀಸ್ ಸ್ಟೇನ್ಸ್ - ಹೀಗೆ ವಿವಿಧ ಧರ್ಮಗಳಲ್ಲಿ ಜನ್ಮ ತಳೆದಿದ್ದರೂ ತಮ್ಮ ಸಾಹಿತ್ಯದಲ್ಲಿ, ಕವಿತೆಗಳಲ್ಲಿ ವಿಚಾರಗಳಲ್ಲಿ ಯಾವುದೇ ರೀತಿಯ ಬೇಧಭಾವ, ಅಸಹನೆ, ಅಹಂಕಾರ, ದ್ವೇಷಗಳನ್ನು ಪ್ರತಿಬಿಂಬಿಸದೆ ಸಕಲ ಮಾನವ.ಕುಲದ ಒಳಿತನ್ನೆ ಬಯಸಿರುವ ಸತ್ವವನ್ನು ನಾವೆಲ್ಲ ಅರ್ಥ ಮಾಡಿಕೊಂಡು ಮಾನವರಾಗಿ ಬದುಕಬೇಕಾಗಿದೆ ; ಅನ್ಯರನ್ನು ಬದುಕಲು ಬಿಡಬೇಕಾಗಿದೆ.

ಆದ್ದರಿಂದ ವಿವಿಧ ಧರ್ಮಗಳಿಗೆ ಸೇರಿದ ನಾವೆಲ್ಲ ಇಂದು ಇಲ್ಲಿ ಒಂದಾಗಿ ಕಲೆತು ಮಾನವೀಯತೆಗಾಗಿ ನಿಂತಿದ್ದೇವೆ. ಬನ್ನಿ ನೀವೂ ನಮ್ಮೊಂದಿಗೆ ಸೇರಿ ನಮ್ಮ ನಿಲುವುಗಳನ್ನು ಪುಷ್ಟೀಕರಿಸಿ, ಪ್ರೋತ್ಸಾಹಿಸಿ, ಬೆಂಬಲಿಸಿ, ಸಹಬಾಳ್ವೆಗೆ ಸಹಾಯ ಹಸ್ತ ನೀಡಿ. ಬನ್ನಿ ನಾವೆಲ್ಲ ಒಂದಾಗಿ ಒಕ್ಕೊರಲಿನಿಂದ ನುಡಿಯೋಣ "ನಮಗೆ ಬೇಕಾಗಿರುವುದು ಇಂದಿನ ಮೋದಿಯ ಗುಜರಾತಲ್ಲ ; ಅಂದಿನ ಗಾಂಧೀ ಗುಜರಾತ್" ಎಂದು.

# ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆ

ಮೈಸೂರು

ಮೈಸೂರಿನ ಶಕ್ತಿಧಾಮ, ಜೆ.ಎಸ್.ಎಸ್. ಜನಶಿಕ್ಷಣ ಸಂಸ್ಥೆ, ಮತ್ತು ನಗರ ಸಾಕ್ಷರತಾ ಸಮಿತಿಗಳ ಸಹಯೋಗದಲ್ಲಿ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಶಕ್ತಿಧಾಮದ ಆವರಣದಲ್ಲಿ ದಿನಾಂಕ 8 ರಂದು ಆಚರಿಸಲಾಯಿತು.

ಆರಂಭದಲ್ಲಿ ಜನಶಿಕ್ಷಣ ಸಂಸ್ಥೆಯ ನಿರ್ದೇಶಕರಾದ ಶ್ರೀಯುತ ಚನ್ನಬಸಪ್ಪನವರು ಅತಿಥಿಗಳನ್ನು ಸ್ವಾಗತಿಸಿದರು. ಬೇವಿನಹಳ್ಳಿ ನಾಗರಾಜು ಮತ್ತು ಕುಮಾರಿ ರೇಖಾ ಪ್ರಾರ್ಥಿಸಿದರು.

ಕಾರ್ಯಕ್ರಮದ ಉದ್ಘಾಟನೆಯನ್ನು ಮಾಡಿದ ಶ್ರೀಮತಿ ಪದ್ಮಜಾ ಗೋಪಾಲಕೃಷ್ಣರವರು ಕ್ರೀಡಾಚಟುವಟಿಕೆಗಳಲ್ಲಿ ಮಹಿಳೆಯರಿಗೆ ಪಾಲ್ಗೊಳ್ಳುವ ಅವಕಾಶ ದೊರಕಬೇಕು; ಹೆಣ್ಣು ಮಕ್ಕಳು ತಮ್ಮ ದೈನಂದಿನ ಸಂಕಷ್ಟಗಳ ವಿರುದ್ಧ ಹೋರಾಡುವ ಚೈತನ್ಯವನ್ನು ಪಡೆದುಕೊಳ್ಳಬೇಕು ಎಂದರು.

ಮುಖ್ಯ ಭಾಷಣಕಾರರಾಗಿ ಮಾತನಾಡಿದ ನಗರದ ಸೋಮಾನಿ ಕಲಾ ಮತ್ತು ವಾಣಿಜ್ಯ ಕಾಲೇಜಿನ ಕನ್ನಡ ಉಪನ್ಯಾಸಕರಾದ ಶ್ರೀಮತಿ ಬಿ.ಸಿ.ಮಂಜುಳಾರವರು, ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಪ್ರಾಮುಖ್ಯತೆಯನ್ನು ಅದರ ಐತಿಹಾಸಿಕ ಹಿನ್ನೆಲೆಯಲ್ಲಿ ವಿವರಿಸಿ, ಅಂದು ಕಾರ್ಮಿಕ ಮಹಿಳೆಯರು ತಮ್ಮ ಹಕ್ಕುಗಳಿಗಾಗಿ ನಡೆಸಿದ ಹೋರಾಟದ ದಿನವನ್ನು ಇಂದು ಮಹಿಳಾ ದಿನವನ್ನಾಗಿ ಆಚರಿಸುತ್ತಿರುವುದು ಅರ್ಥಪೂರ್ಣ. ಮಹಿಳೆ ಮಾತೃಪ್ರಧಾನ ವ್ಯವಸ್ಥೆಯಲ್ಲೂ, ಪಿತೃಪ್ರಧಾನ ವ್ಯವಸ್ಥೆಯಲ್ಲೂ ಶೋಷಣೆಗೊಳಗಾಗುತ್ತಾಳೆ. ಸಮಾನತೆಯ ಪಾತಳಿಯಲ್ಲಿ ಬದುಕು ರೂಪಿಸಿಕೊಂಡಾಗ ಮಾತ್ರ ಏಕಮುಖ ಪ್ರಾಧಾನ್ಯ ಹೋಗಿ ಸೌಹಾರ್ದಯುತ ಸಹಬಾಳ್ವೆ ಸಾಧ್ಯ. ರಾಜಕೀಯ ಶಕ್ತಿಯ ವಿಕೇಂದ್ರೀಕರಣ ಹಾಗೂ ಬೌದ್ಧಿಕ ಶಕ್ತಿಯ ವಿಕೇಂದ್ರೀಕರಣಗಳಿಂದ ಮಹಿಳೆಯ ಬದುಕು ಹಸನಾಗಲು ಸಾಧ್ಯ. ಮಹಿಳೆ ತನ್ನ ಸಶಕ್ತೀಕರಣಕ್ಕಾಗಿ ಸಂಘಟನೆ, ಶಿಕ್ಷಣ ಮತ್ತು ಸ್ವಾವಲಂಬನೆ ಪಡೆಯುವುದು ಅತ್ಯಗತ್ಯ ಸರಕಾರದ ಅಭಿವೃದ್ಧಿ ಯೋಜನೆಗಳ ಪ್ರಯೋಜನ ಮತ್ತು ಸ್ವಯಂ ಸೇವಾ ಸಂಸ್ಥೆಗಳ ನೆರವನ್ನು ಪಡೆದು ಕೊಳ್ಳುವತ್ತ ಗಮನ ಹರಿಸಬೇಕು. ತಾವುಗಳಿಸಿದನ್ನು ವಿವೇಚನಾಳವಾಗಿ ಬಳಸುವ ಹಕ್ಕು ತಮ್ಮದಾಗಿಸಿಕೊಳ್ಳಬೇಕು ಎಂದು ತಿಳಿಸಿದರು.

ಅನಂತರ ಮಾತನಾಡಿದ ಲೇಖಕಿ ಡಾ.ವಿಜಯಾ ದಬ್ಬೆ, ಇಂದಿನ ಹೊಸಜಗತ್ತು ಮಹಿಳೆಯರು. ಹೋರಾಡುವ ಶಕ್ತಿಯನ್ನು ನಿಮ್ಮದಾಗಿಸಿಕೊಂಡು ದೈನಂದಿನ ಸಂಕಷ್ಟಗಳನ್ನು ಎದುರಿಸಿ ಎಂದು ಅಲ್ಲಿ ನೆರೆದಿದ್ದ ಮಹಿಳೆಯರಿಗೆ ಕರೆನೀಡಿದರು.

ಖ್ಯಾತ ವಕೀಲರಾದ ಶ್ರೀಮತಿ ಎಂ.ಎಸ್. ಸುಮನ್‌ರವರು ಮಾತನಾಡಿ, ಕಾನೂನುಗಳು ಮಹಿಳಾ ಪರವಾಗಿದ್ದರೂ, ಅವು ಕಾರ್ಯಗತಗೊಳ್ಳುತ್ತಿಲ್ಲ. ಅವು ಸಮರ್ಪಕವಾಗಿ ಜಾರಿಗೊಳ್ಳುವತ್ತ ಪ್ರಯತ್ನಗಳು ನಡೆಯಬೇಕಾಗಿದೆ ಎಂದರು.

'ಶಕ್ತಿಧಾಮ'ದ ಆಶ್ರಿತ ಮಹಿಳೆಯರನ್ನೊಳಗೊಂಡಂತೆ ನೂರಕ್ಕೂ ಹೆಚ್ಚು ಮಂದಿ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

ಮೈಸೂರಿನ ಸ್ತ್ರೀ ಶಕ್ತಿ ಮಹಿಳಾ ವೇದಿಕೆ ಮತ್ತು ಶಾ ಹಾಗಾಮಿಲಾಲ್ ನಿರ್ಮಲ್ ಕುಮಾರ್ ಟ್ರಸ್ಟ್‌ಗಳ ಸಹಯೋಗದಲ್ಲಿ ದಿನಾಂಕ 8 ರಂದು ಮೈಸೂರಿನ ಕೇಂದ್ರ ಕಾರಾಗೃಹದಲ್ಲಿ ಅಂತರರಾಷ್ಟ್ರೀಯ ಮಹಿಳಾ ದಿನಾಚರನೆಯನ್ನು ಆಚರಿಸಲಾಯಿತು.

ಮುಖ್ಯ ಅತಿಥಿಯಾಗಿ ಮರಿಮಲ್ಲಪ್ಪ ಮಹಿಳಾ ಕಾಲೇಜಿನ ಉಪನ್ಯಾಸಕರಾದ ಶ್ರೀಮತಿ ಶೈಲಜಾ ನಾಗರಾಜರವರು, ಮಹಿಳಾ ಕೈದಿಗಳನ್ನು ಅಪರಾಧಿಗಳೆಂದು ಕಾಣಬೇಡಿ ಎಂದು ಕರೆ ನೀಡಿದರು.

ಇದೇ ಸಂದರ್ಭದಲ್ಲಿ ಪೊಲೀಸ್ ಸೂಪರಿಂಟೆಂಡೆಂಟ-ರಾದ ಶ್ರೀಯುತ ಕೆ.ಎಚ್. ಶ್ರೀನಿವಾಸರವರು, ಮಹಿಳಾಖೈದಿಗಳಿಗೆ ತಮ್ಮ ಹಕ್ಕುಗಳ ಬಗ್ಗೆ ವಾರ್ತಾಪತ್ರಿಕೆಗಳ ಮೂಲಕ ಶಿಕ್ಷಣವನ್ನು ನೀಡಬಹುದು ಎಂದರು.

ವೇದಿಕೆಯ ಅಧ್ಯಕ್ಷೆ ಶ್ರೀಮತಿ ಎಸ್. ಪ್ರಮಿಳಾರವರು ಮಾತನಾಡಿ, ಮಹಿಳಾ ಖೈದಿಗಳ ಪ್ರಕರಣಗಳನ್ನು ಪರಿಶೀಲಿಸಿ ಅವರನ್ನು ಬಿಡುಗಡೆ ಮಾಡುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಬೇಕು. ಅವರು ದೀರ್ಘಕಾಲ ಇಲ್ಲಿ ಉಳಿಯದಂತೆ ನೋಡಿಕೊಳ್ಳುವುದು ಸರಕಾರದ ಕರ್ತವ್ಯ. ಏಕೆಂದರೆ, ಅವರು ಕ್ಷುಲಕ ಕಾರಣಗಳಿಗಾಗಿ ಬಂಧಿಸಲಾಗಿರುತ್ತದೆ. ಅವರು ತಮ್ಮ ತಪ್ಪುಗಳನ್ನು ಅರಿತು ತಿದ್ದಿ ಕೊಂಡಿರುತ್ತಾರೆ ಎಂದರು.

ಕುಮಾರಿ ಯರಾದ ವೀಣಾ, ಪ್ರೇಮ ಸುಜೀವ ರತ್ನಶೀಲ, ಶಶಿರೇಖಾ, ಶ್ರೀಮತಿ ಲತಾ ಮೋಹನ್, ಪೊನ್ನಮ್ಮ, ಸುಂದರಮ್ಮ ಸಂಘದ ಸದಸ್ಯೆಯರಾಗಿ ಭಾಗವಹಿಸಿದ್ದರು.

ಈ ಸಂದರ್ಭದಲ್ಲಿ ಮಹಿಳಾ ಖೈದಿಗಳಿಗೆ ಸಿಹಿ ಮತ್ತು ಹಣ್ಣುಗಳನ್ನು ವಿತರಿಸಲಾಯಿತು.

ಮೈಸೂರಿನ ಸಮತಾ, ಪ್ರಗತಿಪರ ಮಹಿಳಾ ವೇದಿಕೆಯು ಮೈಸೂರು ವಿಶ್ವವಿದ್ಯಾನಿಲಯದ ಮಹಿಳಾ ಅಧ್ಯಯನ ಕೇಂದ್ರದ ಸಹಯೋಗದಲ್ಲಿ ದಿನಾಂಕ 8 ರಂದು ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ತನ್ನದೇ ವಿಶಿಷ್ಟ ರೀತಿಯಲ್ಲಿ ಆಚರಿಸುವುದರೊಂದಿಗೆ ತನ್ನ ಬೆಳ್ಳಿಹಬ್ಬವನ್ನೂ ಆಚರಿಸಿಕೊಂಡಿತು. 1978 ರಲ್ಲಿ ಬೆರಳೆಣಿಕೆಯಷ್ಟು ಶಿಕ್ಷಿತ-ವಿಚಾರವಂತ ಮಹಿಳೆಯರ ಚಿಂತನ ವೇದಿಕೆಯಾಗಿ ಆರಂಭಗೊಂಡ ವೇದಿಕೆಯು ತನ್ನ ಕ್ರಿಯಾವಂತಿಕೆಯಿಂದ ಒಂದು ಮಹಿಳಾಪರವಾದ ಮಹಾಶಕ್ತಿಯಾಗಿ ಎಂಬತ್ತರ ದಶಕದಲ್ಲಿ ಬೆಳೆದು ನಿಂತಿತು. ಇಂದಿಗೂ ತನ್ನ ಕ್ರಿಯಾವಂತಿಕೆಯಿಂದಾಗಿ ಜನಮನದಲ್ಲಿ ಬೇರು ಬಿಟ್ಟಿರುವ ವೇದಿಕೆಯು ಇತ್ತೀಚೆಗೆ 'ಪ್ರಜಾಮತ'ದ ಪ್ರಶಂಸಾ ಪ್ರಶಸ್ತಿಗೂ ಭಾಜನವಾದುದು ಅದರ ಗರಿಮೆಗೆ ಸಾಕ್ಷಿಯಾಗಿದೆ. ಇದನ್ನೆ ವೇದಿಕೆಯ ಸಕ್ರಿಯ ಸದಸ್ಯೆಯಾದ ಶ್ರೀಮತಿ ಮೀರಾನಾಯಕ್ ವೇದಿಕೆಯಿಂದ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾದ ಕೆಲವು ಪ್ರಕರಣಗಳನ್ನು ಮೆಲುಕು ಹಾಕುವ ಮೂಲಕ ಅಲ್ಲಿ ನೆರೆದಿದ್ದ ಸಭಿಕರಿಗೆ ವೇದಿಕೆಯ ಸಾಧನೆಗಳ ನೆನಪು ಮಾಡಿಕೊಟ್ಟರು.

ಆರಂಭದಲ್ಲಿ ಸದಸ್ಯೆಯರು ವೇದಿಕೆಯ ಆಶಯಗೀತೆಯಾದ 'ತೂರಬೇಡಿ ಗಾಳಿಗೆ ಹೆಣ್ತನದ ಘನತೆಯ' ಎಂದು ಹಾಡಿದರು. ಶ್ರೀಮತಿ ಕುಮುದಾರವರು ಬಂದಿದ್ದ ಅತಿಥಿಗಳನ್ನು ಸ್ವಾಗತಿಸಿದರು.

ಆರಂಭಿಕ ಭಾಷಣ ಮಾಡಿದ ವಿಜ್ಞಾನಿಯಾದ ಡಾ. ಇ. ರತಿರಾವ್ 1908 ರಲ್ಲಿ ನ್ಯೂಯಾರ್ಕಿನ ಬಟ್ಟೆ ಗಿರಣಿಯೊಂದರ ಮಹಿಳಾ ಕಾರ್ಮಿಕರು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಿದ್ದು, ಮುಂದಿನ ಮಹಿಳಾ ಹೋರಾಟಗಳಿಗೆ ನಾಂದಿಯಾಯಿತೆನ್ನುವುದನ್ನು ಸ್ಮರಿಸಿಕೊಂಡರು. ಇಂಥ ಆಚರಣೆಗಳು ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿಗೆ ದಾರಿಯಾಗಬೇಕೆಂದು ಆಶಿಸಿದರು.

ಅನಂತರ ನಡೆದ 'ಸಂವಾದ' ಕಾರ್ಯಕ್ರಮದಲ್ಲಿ ಅಮೆರಿಕದ ಕ್ಯಾಲಿಫೋರ್ನಿಯಾದ 'ಮೈತ್ರಿ' ಸಂಘಟನೆಯ ಅಶಿತಾ ಪ್ರಭುಶಂಕರ್ ರವರು, ಭಾರತ ಬಿಟ್ಟು ಅಮೆರಿಕಕ್ಕೆ ಹೋದ ಮಹಿಳೆಯರಿಗೂ ಗಂಡಿನ ದೌರ್ಜನ್ಯ ತಪ್ಪಿದ್ದಲ್ಲ ಎನ್ನುವುದನ್ನು ತಾವು ಕಂಡ ಹಲವು ಘಟನೆಗಳ ಹಿನ್ನೆಲೆಯಲ್ಲಿ ವಿವರಿಸಿದರು ನಗರದ ಪೋಲೀಸ್ ಠಾಣೆಯ ಸಬ್ ಇನ್‌ಸ್ಪೆಕ್ಟರರಾದ ಶ್ರೀಮತಿ ದೇವಮ್ಮ, ಕೆ.ಆರ್.ಆಸ್ಪತ್ರೆಯ ಹಿರಿಯ ನೇತ್ರತಜ್ಞೆಯಾದ ಡಾ. ಹೆಚ್.ಆರ್.ಮಣಿಕರ್ಣಿಕಾ ಹಾಗೂ ಕೌಟುಂಬಿಕ ಸಲಹೆಗಾರರಾದ ಶ್ರೀಯುತ ಶಿವಸುಬ್ರಹ್ಮಣ್ಯರವರು ಸಭಿಕರನ್ನುದ್ದೇಶಿಸಿ ಮಾತನಾಡಿದರು ; ಮುಂದೆ ನಡೆಯಲಿದ್ದ ಸಂವಾದಕ್ಕೆ ಪೀಠಿಕೆ ಹಾಕಿಕೊಟ್ಟರು. ಈಗ ಬಂದದ್ದು ವಿವೇಚನಾ ಪೂರ್ಣವಾದ ಪ್ರಶ್ನೆಗಳ ಸುರಿಮಳೆ. ಅತ್ಯಂತ ಸೂಕ್ತವಾಗಿ, ಸಮಾಧಾನದಿಂದ ಉತ್ತರಗಳೂ ಪ್ರಶ್ನಿಸಿದವರಿಗೆ ದೊರೆತವು. ಈ ಮಧ್ಯೆ ಎಲ್ಲರನ್ನು ಆಕರ್ಷಿಸಿ ನೆನಪಿನಲ್ಲುಳಿದಂಥ ಪ್ರಶ್ನೆಯೊಂದು ಕಿಶೋರಿಯೊಬ್ಬಳಿಂದ ಎದುರಾಯಿತು : 'ನೀವು ನಮ್ಮೆಲ್ಲರ ಪ್ರೀತಿ, ಮನ್ನಣೆಗೆ ತಮ್ಮ ಸಾಧನೆಗಳಿಂದಾಗಿ ಪಾತ್ರರಾಗಿದಿದ್ದೀರಿ. ಮಹಿಳೆಯರಾಗಿ ನೀವು ಎದುರಿಸಿದ ಸಮಸ್ಯೆಗಳೇನು ? ದೇವಮ್ಮನವರು, 'ನನ್ನ ಕರ್ತವ್ಯ ನಿಷ್ಠೆಯೇ ನನ್ನ ಶಕ್ತಿ. ನನ್ನ ಉದ್ಯೋಗ ಕ್ಷೇತ್ರ, ಸ್ಥಾನಗಳೇ ನನಗೆ ಎಲ್ಲವನ್ನು ಎದುರಿಸುವ ಧೈರ್ಯ ಕೊಟ್ಟಿದೆ' ಎಂದರೆ, ಮಣಿಕರ್ಣಿಕಾ 'ನನಗೆ ಯಾವುದೂ ಸುಲಭವಾಗಿ ದಕ್ಕಲಿಲ್ಲ. ಆದರೆ ನನ್ನ ಗುರಿ ಸ್ಪಷ್ಟವಾಗಿತ್ತು ; 'ಸಾಧಿಸುವ ಛಲವಿತ್ತು' ಎಂದುರು.

ಖ್ಯಾತ ವಕೀಲರಾದ ಶ್ರೀಮತಿ ಸುಮನಾ, ಪ್ರಾಧ್ಯಾಪಕ ಆರ್.ಇಂದಿರಾ ಮುಂತಾದವರು ಮಾತನಾಡಿದರು. ಇದೇ ಸಂದರ್ಭದಲ್ಲಿ ವೇದಿಕೆಯು ನಡೆಸಿದ್ದ ಹಲವು ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಅತಿಥಿಗಳು ಬಹುಮಾನಗಳನ್ನು ನೀಡಿದರು.

ಮಹಿಳಾ ದಿನಾಚರಣೆಯಂದು ಬೆಳ್ಳಿಹಬ್ಬದ ಸಡಗರವೂ ಸೇರಿ ಅದೊಂದು ಸುಂದರ ಸಂಜೆಯಾಗಿ ಮೆಲುಕು ಹಾಕುವಂಥಾ ಒಂದು ವಿಶಿಷ್ಟ ಅನುಭವವಾದುದು ಸುಳ್ಳಲ್ಲ !

**ವರದಿ : ವನಜ**

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

ಸಂ.ಮಂಡಳಿ



REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067